# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೯<br>**Volume 149** | ಬೆಂಗಳೂರು, ಗುರುವಾರ, ಜುಲೈ ೩, ೨೦೧೪ (ಆಷಾಢ ೧೨, ಶಕ ವರ್ಷ ೧೯೩೬)<br>**Bangalore, Thursday, July 3, 2014 (Aashadha 12, Shaka Varsha 1936)** | ಸಂಚಿಕೆ ೨೭<br>**Issue 27** |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ನೂತನ ಜವಳಿ ನೀತಿ 2013–18.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ: ವಾಕೈ 47 ಜಕೈಯೋ 2008 ದಿನಾಂಕ; 01–10–2008

**ಪ್ರಸ್ತಾವನೆ:**

1. ಮೇಲೆ ಓದಲಾದ ಸರ್ಕಾರಿ ಆದೇಶ ದಿನಾಂಕ: 01–10–2008ರಲ್ಲಿ, ರಾಜ್ಯದಲ್ಲಿ ಜವಳಿ ಕ್ಷೇತ್ರದ ಸಮಗ್ರ ಅಭಿವೃದ್ಧಿಗಾಗಿ **"ಸುವರ್ಣ ವಸ್ತ್ರನೀತಿ 2008–13"** ಎಂಬ ಹೆಸರಿನಲ್ಲಿ ರಾಜ್ಯ ಜವಳಿ ನೀತಿಯನ್ನು ಜಾರಿಗೆ ತರಲಾಗಿತ್ತು. ಈ ನೀತಿಯ ಅನುಷ್ಠಾನಕ್ಕಾಗಿ 5 ವರ್ಷಗಳ ಅವಧಿಗೆ ರೂ.500 ಕೋಟಿಗಳ ಆಯವ್ಯಯ ಹಂಚಿಕೆಯನ್ನು ಘೋಷಿಸಲಾಗಿತ್ತು. ನೀತಿಯ ಅವಧಿಯಲ್ಲಿ ರೂ.10.000 ಕೋಟಿ ಬಂಡವಾಳ ಹೂಡಿಕೆಯ ಆಕರ್ಷಣೆಯ ಮೂಲಕ 5 ಲಕ್ಷ ಜನರಿಗೆ ಉದ್ಯೋಗ ಅವಕಾಶಗಳನ್ನು ಸೃಷ್ಟಿಸುವ ಗುರಿಯನ್ನು ಹೊಂದಲಾಗಿತ್ತು.
2. ನೀತಿಯ ಅವಧಿಯಲ್ಲಿ ರೂ.5280 ಕೋಟಿ ಬಂಡವಾಳ ಹೂಡಿಕೆಯನ್ನು ಆಕರ್ಷಿಸಲು ಸಾಧ್ಯವಾಗಿದ್ದು, ಹೂಡಿಕೆಯಾಗಿರುವ ಬಂಡವಾಳದಿಂದ ಸುಮಾರು 2,60,000 ನೇರ ಹಾಗೂ ಪರೋಕ್ಷ ಉದ್ಯೋಗ ಅವಕಾಶಗಳು ಸೃಷ್ಠಿಯಾಗಿರುತ್ತವೆ.
3. ಜವಳಿ ಕ್ಷೇತ್ರದ ಅಭಿವೃದ್ಧಿಗೆ ಸರ್ಕಾರವು ಕೈಗೊಂಡಿರುವ ಪೂರಕ ಕ್ರಮಗಳಿಂದಾಗಿ ರಾಜ್ಯದಲ್ಲಿ ಜವಳಿ ಮೌಲ್ಯ ಸರಣಿಯ ಎಲ್ಲಾ ಚಟುವಟಿಕೆಗಳಲ್ಲಿ ಹಾಗೂ ಇಂಟಿಗ್ರೇಟೆಡ್ ಘಟಕಗಳಲ್ಲಿ ಬಂಡವಾಳ ಹೂಡಿಕೆಯನ್ನು ಆಕರ್ಷಿಸಲು ಸಾಧ್ಯವಾಗಿದೆ. ಈ ಹಿನ್ನೆಲೆಯಲ್ಲಿ ನೀತಿಯನ್ನು ಮುಂದಿನ 5 ವರ್ಷಗಳ ಅವಧಿಗೆ ಮುಂದುವರೆಸಿ, ಇನ್ನೂ ಹೆಚ್ಚಿನ ಬಂಡವಾಳ ಆಕರ್ಷಣೆ ಮೂಲಕ ಹೆಚ್ಚಿನ ಉದ್ಯೋಗ ಅವಕಾಶಗಳನ್ನು ಸೃಷ್ಠಿಸಲು ಪ್ರಸ್ತಾಪಿಸಲಾಗಿದೆ.
4. ಮುಂಬರುವ ಜವಳಿ ನೀತಿಯಲ್ಲಿ ತರಬಹುದಾದ ಬದಲಾವಣೆಗಳ ಬಗ್ಗೆ ಜವಳಿ ವಲಯದ ವಿವಿಧ ಕೈಗಾರಿಕೋದ್ಯವಿಮಗಳಿಂದ ಮನವಿಗಳು ಬಂದಿರುತ್ತವೆ. ಕೈಗಾರಿಕೋದ್ಯಮಿಗಳೊಂದಿಗೆ ಸಮಾಲೋಚನೆಗಳನ್ನು ನಡೆಸಿ, ವ್ಯಕ್ತವಾದ ಅಭಿಪ್ರಾಯ, ಸಲಹೆಗಳನ್ನು ಪರಿಶೀಲಿಸಿ ಪರಿಗಣಿಸಲಾಗಿದೆ.
5. ಎಂ.ಎಸ್. ಎಂ. ಇ, ಸಂಘಟಿತ ಕೈಮಗ್ಗ ಮತ್ತು ವಿದ್ಯುತ್ ಮಗ್ಗ ವಲಯಗಳಿಗೆ ಇನ್ನೂ ಹೆಚ್ಚಿನ ಸೌಲಭ್ಯಗಳನ್ನು ನೀತಿಯಲ್ಲಿ ಒದಗಿಸಬೇಕೆಂದು ಬೇಡಿಕೆಗಳು ಬಂದಿರುತ್ತವೆ. ಸರ್ಕಾರದ ವಿವಿಧ ಕಾರ್ಯಕ್ರಮಗಳಲ್ಲಿ ವಾರ್ಷಿಕ ಸುಮಾರು ರೂ.200 ಕೋಟಿಯಷ್ಟು ಅನುದಾನವನ್ನು ಅಸಂಘಟಿತ ಕೈಮಗ್ಗ ಮತ್ತು ವಿದ್ಯುತ್ ಮಗ್ಗ ವಲಯದ ಅಭಿವೃದ್ಧಿಗಾಗಿ ವೆಚ್ಚ ಮಾಡಲಾಗುತ್ತಿದೆ. ಪ್ರಸ್ತುತ ನೀತಿಯು ಅಸಂಘಟಿತ ಕೈಮಗ್ಗ ಮತ್ತು ವಿದ್ಯುತ್ ಮಗ್ಗ ವಲಯಗಳಿಗೂ ತನ್ನ ಬೆಂಬಲವನ್ನು ಮುಂದುವರೆಸುವುದು.
6. ಜವಳಿ ಮೌಲ್ಯ ಸರಣಿಯಲ್ಲಿ ಸ್ಪಿನ್ನಿಂಗ್ ಚಟುವಟಿಕೆಯು ಪ್ರಮುಖವಾದುದು. ಕರ್ನಾಟಕವ ುಪ್ರತಿ ವರ್ಷ ಸುಮಾರು 12 ಲಕ್ಷ ಬೇಲ್‌ಗಳಷ್ಟು ಹತ್ತಿಯನ್ನು ಉತ್ಪಾದಿಸುತ್ತಿದೆ. ರಾಜ್ಯದಲ್ಲಿ ಬೆಳೆಯುವ ಬಹುತೇಕ ಹತ್ತಿಯು ನೂಲಿನ ಪರಿವರ್ತನೆಗಾಗಿ ಹೊರ ರಾಜ್ಯಗಳಿಗೆ ಹೋಗುತ್ತಿದೆ. ಈ ಹಿನ್ನೆಲೆಯಲ್ಲಿ ರಾಜ್ಯದಲ್ಲಿನ ಸ್ಪಿನ್ನಿಂಗ್ ವಲಯವನ್ನೂ ಸಹ ಸಶಕ್ತಗೊಳಿಸುವುದು ಅವಶ್ಯವಿದೆ.
7. ಕರ್ನಾಟಕ ರಾಜ್ಯದ ಸ್ಪಿನ್ನಿಂಗ್ ವಲಯವು 10 ಸಹಕಾರಿ ನೂಲಿನ ಗಿರಣಿಗಳು ಹಾಗೂ 25 ಖಾಸಗಿ ಜವಳಿ ಗಿರಣಿಗಳನ್ನು ಹೊಂದಿದೆ. ಸಹಕಾರಿ ವಲಯದ ನೂಲಿನ ಗಿರಣಿಗಳನ್ನು ಬಲಪಡಿಸಲು ಅವುಗಳ ಆಧುನೀಕರಣ ಮತ್ತು ವಿಸ್ತರಣೆಗೆ ಅವಕಾಶ ಮಾಡಿಕೊಡಬೇಕೆಂದು ಬೇಡಿಕೆ ಇರುತ್ತದೆ.
8. ನೂಲಿನ ಗಿರಣಿಗಳು ಆಧುನೀಕರಣ/ವಿಸ್ತರಣೆಯನ್ನು ಕೈಗೊಳ್ಳಲು ಬಂಡವಾಳ ಹೂಡಿಕೆ ಸಹಾಯಧನ, ಪ್ರವೇಶ ತೆರಿಗೆ ಸಹಾಯಧನ, ಮುದ್ರಾಂಕ ಶುಲ್ಕ ಸಹಾಯಧನ, ಮುಂತಾದ ಸೌಲಭ್ಯಗಳನ್ನು ಒದಗಿಸಲಾಗುತ್ತದೆ.
9. ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ದಿನಾಂಕ: 05–10–2013 ರಂದು ಸಭೆ ಕರೆಯಲಾಗಿತ್ತು. ಸದರಿ ಸಭೆಯಲ್ಲಿ ನೂತನ ಜವಳಿ ನೀತಿ 2013–18ರ ಕುರಿತು ಸುಧೀರ್ಘವಾಗಿ ಚರ್ಚಿಸಿ ಕರಡನ್ನು ಸಿದ್ಧಪಡಿಸಲಾಗಿರುತ್ತದೆ.

10. ಸರ್ಕಾರವು ಈ ಎಲ್ಲಾ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ನೂತನ ಜವಳಿ ನೀತಿ 2013–18 ಅನ್ನು ಜಾರಿಗೆ ತರಲು ತೀರ್ಮಾನಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 44 ಜಕೈಯೋ 2012, ಬೆಂಗಳೂರು ದಿನಾಂಕ: 31–10–2013.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಸಂದರ್ಭಗಳ ಬೆಳಕಿನಲ್ಲಿ ನೂತನ ಜವಳಿ ನೀತಿ 2013–18ನ್ನು ಘೋಷಿಸಲು ಸರ್ಕಾರವು ಹರ್ಷಿಸುತ್ತದೆ. ಇದು ಇನ್ನಿತರೆ ಅಂಶಗಳೊಂದಿಗೆ ಜವಳಿ ಮತ್ತು ಉಡುಪುಗಳ ಉದ್ಯಮಕ್ಕೆ ಗ್ರೇಡೆಡ್ ಸ್ಕೇಲ್ ಪ್ರೋತ್ಸಾಹಗಳನ್ನು ನೀಡುವ ಸಲುವಾಗಿ ಕರ್ನಾಟಕದಲ್ಲಿನ ಜಿಲ್ಲೆಗಳನ್ನು ವಲಯಗಳನ್ನಾಗಿ ವಿಂಗಡಿಸಿರುವ ವಿವರಗಳನ್ನು ಒಳಗೊಂಡಿರುತ್ತದೆ.

**ನೂತನ ಜವಳಿ ನೀತಿ 2013–18ರ ವೈಶಿಷ್ಟ್ಯಗಳು ಈ ಕೆಳಕಂಡಂತಿರುತ್ತವೆ:**

**1. ಉದ್ದೇಶ:**

ಅ] ಸಮಗ್ರ ಜವಳಿ ಮೌಲ್ಯ ಸರಣಿಯ ಎಲ್ಲಾ ಚಟುವಟಿಕೆಗಳ ಅಭಿವೃದ್ಧಿಯನ್ನು ಸಾಧಿಸುವುದು ಹಾಗೂ ಪ್ರಾದೇಶಿಕ ಅಭಿವೃದ್ಧಿಗೆ ಒತ್ತು ನೀಡುವುದು.

ಆ] ತಾಂತ್ರಿಕ ಜವಳಿ ವಲಯವೂ ಸೇರಿದಂತೆ ಜವಳಿ ಮೌಲ್ಯ ಸರಣಿಯ ಎಲ್ಲಾ ಚಟುವಟಿಕೆಗಳ ಹಾಗೂ ಸಿದ್ಧ ಉಡುಪು ವಲಯದಲ್ಲಿನ ಸಣ್ಣ ಮತ್ತು ಮಧ್ಯಮ ಉದ್ದಿಮೆಗಳ ಮೇಲೆ ಅಲಂಬಿತವಾಗಿರುವ ಜನರ ಆದಾಯ ಹೆಚ್ಚಿನ ತನ್ಮೂಲಕ ಅವರ ಜೀವನಮಟ್ಟ ಹೆಚ್ಚಿಸುವುದು.

ಇ] ಉತ್ಪಾದನಾ ತಂತ್ರಜ್ಞಾನ, ಸಂಶೋಧನೆ ಮತ್ತು ಅಭಿವೃದ್ಧಿ, ಮಾರುಕಟ್ಟೆ ಅಭಿವೃದ್ಧಿ, ದೇಶೀಯ ಮತ್ತು ಜಾಗತಿಕ ಮಟ್ಟದ ವಾಣಿಜ್ಯ ಅವಕಾಶಗಳ ಸದುಪಯೋಗ ಹಾಗೂ ಜವಳಿ ಮೌಲ್ಯ ಸರಣಿಯ ಚಟುವಟಿಕೆಗಳಲ್ಲಿ ಕೌಶಲ್ಯ ಅಭಿವೃದ್ಧಿಯ ಮೂಲಕ ಜವಳಿ ವಲಯಕ್ಕೆ ನೆರವಾಗುವುದು.

**2. ನಿಗದಿತ ಗುರಿಗಳು:**

ಅ] ಈ ನೀತಿಯು 2013 ರಿಂದ 2018ರವರೆಗೆ 5 ವರ್ಷಗ ಅವಧಿಗೆ ಜಾರಿಯಲ್ಲಿರುತ್ತದೆ.

ಆ] ನೀತಿಯ ಅವಧಿಯಲ್ಲಿ 5 ಲಕ್ಷ ಹೊಸ ಉದ್ಯೋಗ ಅವಕಾಶಗಳನ್ನು ಸೃಷ್ಟಿಸುವ ಗುರಿ ಹೊಂದಿರುತ್ತದೆ.

ಇ] ನೀತಿಯ ಅವಧಿಯಲ್ಲಿ ರೂ.10.000 ಕೋಟಿವರೆಗಿನ ಬಂಡವಾಳ ಹೂಡಿಕೆಯನ್ನು ಜವಳಿ ವಲಯದಲ್ಲಿ ಆಕರ್ಷಿಸುವ ಗುರಿ ಹೊಂದಿರುತ್ತದೆ.

ಈ] ರಾಜ್ಯ ಸರ್ಕಾರವು ನೀತಿಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ರೂ.1,000 ಕೋಟಿವರೆಗಿನ ಹಣಕಾಸಿನ ನೆರವನ್ನು ಒದಗಿಸುವ ಪ್ರಸ್ತಾಪ ಹೊಂದಿದೆ.

**3. ನೀತಿಯು ಒಳಗೊಂಡಿರುವ ವಲಯಗಳು:**

ಜಿನ್ನಿಂಗ್ & ಪ್ರೆಸ್ಸಿಂಗ್, ಸ್ಪಿನ್ನಿಂಗ್, ಮಗ್ಗಪೂರ್ವ ಚಟುವಟಿಕೆಗಳು, ನೇಯ್ಗೆ (ಕೈಮಗ್ಗ & ವಿದ್ಯುತ್‌ಮಗ್ಗ), ಹೆಣಿಗೆ (ನಿಟ್ಟಿಂಗ್), ಸಂಸ್ಕರಣೆ (ಪ್ರೋಸೆಸಿಂಗ್), ತಾಂತ್ರಿಕ ಜವಳಿ, ಸಿದ್ಧ ಉಡುಪು (ಗಾರ್ಮೆಂಟಿಂಗ್), ಎಂಬ್ರಾಯಿಡರಿ, ಲೆದರ್ ಗಾರ್ಮೆಂಟ್ಸ್, ಜವಳಿ ಯಂತ್ರೋಪಕರಣ ತಯಾರಿಕೆ ಹಾಗೂ ಜವಳಿ ಉತ್ಪಾದನೆಗೆ ಸಂಬಂಧಿಸಿದ ಇನ್ನಿತರ ಪೂರಕ ಚಟುವಟಿಕೆಗಳು.

**4. ಜವಳಿ ಘಟಕಗಳಿಗೆ ನೀಡಲಾಗುವ ಪ್ರೋತ್ಸಾಹನಗಳು:**

ಅ] ರಾಜ್ಯದಲ್ಲಿ ಜವಳಿ ಉದ್ಯಮವನ್ನು ಪ್ರೋತ್ಸಾಹಿಸುವ ಸಲುವಾಗಿ ಬಂಡವಾಳ ಆಕರ್ಷಣೆಯ ಸಲುವಾಗಿ ಹಾಗೂ ರಾಜ್ಯದ ಒಟ್ಟಾರೆ ಸಾಮರ್ಥ್ಯ ಬಲವರ್ಧನೆಗೆ ಪ್ರೋತ್ಸಾಹನಗಳನ್ನು ನೀಡಲು ಪ್ರಸ್ತಾಪಿಸಲಾಗಿದೆ.

ಆ] ಪ್ರಸ್ತಾವಿತ ಪ್ರೋತ್ಸಾಹನಗಳು ಜವಳಿ ವಲಯದ ಬಂಡವಾಳ ಹೂಡಿಕೆಗೆ ನೆರವಾಗಲಿದ್ದು, ಜಾಗತಿಕ ಸ್ಪರ್ಧೆಗಳನ್ನೆದುರಿಸಲು ಜವಳಿ ಘಟಕಗಳಿಗೆ ನೆರವಾಗಲಿವೇ ಈ ಪ್ರೋತ್ಸಾಹನಗಳು ನೀತಿಯ ಅವಧಿಗೆ ಅಂದರೆ 2013–18 ಕ್ಕೆ ಸೀಮಿತವಾಗಿರುತ್ತವೆ.

ಇ] ಪ್ರಸ್ತಾವಿತ ಪ್ರೋತ್ಸಾಹನಗಳ ಯೋಜನೆ, ಉದ್ದೇಶ, ಅರ್ಹತೆ ಮತ್ತು ನಿಧೀಕರಣದ ವಿನ್ಯಾಸಗಳು (Funding Pattern) ಅನುಬಂಧದಲ್ಲಿರುವ ಜವಳಿ ನೀತಿಯಂತೆ ಇರುತ್ತವೆ.

**5. ಉತ್ಕೃಷ್ಟತಾ ಕೇಂದ್ರ (Centre of Excellence) ಸ್ಥಾಪನೆ**

ಜವಳಿ ಮೌಲ್ಯಸರಣಿಯ ಚಟುವಟಿಕೆಗಳ ಬಲವರ್ಧನೆಗಾಗಿ ಹಾಗೂ ತಾಂತ್ರಿಕ ಬೆಂಬಲ ಒದಗಿಸುವ ಸಲುವಾಗಿ ರಾಜ್ಯದಲ್ಲಿ ಜವಳಿ ಉತ್ಕೃಷ್ಟತಾ ಕೇಂದ್ರವೊಂದನ್ನು ಸ್ಥಾಪಿಸಲಾಗುವುದು. ಈ ಉದ್ದೇಶಕ್ಕಾಗಿ ರೂ.10.00 ಕೋಟಿಗಳ ಅನುದಾನ ಮೀಸಲಿರಿಸಲಾಗುವುದು.

**6. ಅಸ್ತಿತ್ವದಲ್ಲಿರುವ ಘಟಕಗಳಿಗೆ ಬೆಂಬಲ:**

ಜವಳಿ ಮತ್ತು ಉಡುಪು ಕ್ಷೇತ್ರದಲ್ಲಿ ಅಸ್ತಿತ್ವದಲ್ಲಿರುವ ಘಟಕಗಳಿಗೆ ವಿಸ್ತರಣೆ/ವೈವಿಧ್ಯೀಕರಣ/ಆಧುನೀಕರಣ/ಉನ್ನತೀಕರಣಕ್ಕೆ ನೀತಿಯು ಬೆಂಬಲಿಸುತ್ತದೆ.

**7. ಸ್ಪಿನ್ನಿಂಗ್ ಮಿಲ್ ಪ್ಯಾಕೇಜ್:**

ಆಧುನೀಕರಣ/ವಿಸ್ತರಣೆ/ತಾಂತ್ರಿಕತೆ ಉನ್ನತೀಕರಣ ಮತ್ತು ವೈವಿಧ್ಯೀಕರಣ ಕೈಗೊಳ್ಳವ ರೋಗಗ್ರಸ್ಥ ಸಹಕಾರಿ ನೂಲಿನ ಗಿರಣಿಗಳಿಗೆ ನಿರ್ದಿಷ್ಟ ಪುನಃಶ್ಚೇತನ ಪ್ಯಾಕೇಜ್ ಒದಗಿಸಲಾಗಿದೆ.

8. ನೂತನ ಜವಳಿ ನೀತಿ 2013–18ರ ಮೇರೆಗೆ ನೀಡಲಾಗುವ ಪ್ರೋತ್ಸಾಹನಗಳ ಪ್ಯಾಕೇಜ್‌ಗಳು ದಿನಾಂಕ; 31/10/2013 ರಿಂದ ಜಾರಿಗೊಂಡು 5 ವರ್ಷಗಳ ಅವಧಿಯವರೆಗೆ ಚಾಲ್ತಿಯಲ್ಲಿರುತ್ತದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 1248 ವೆಚ್ಚ/1 2013 ದಿನಾಂಕ; 10–10–2013ರ ಪ್ರಕಾರ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ನೂತನ ಜವಳಿ ನೀತಿ 2013–18ರ ವಿಸ್ತೃತ ಪ್ರತಿಯನ್ನು ಈ ಆದೇಶಕ್ಕೆ ಅನುಬಂದಿಸಲಾಗಿದೆ.

ಈ ಆದೇಶವು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 1248 ವೆಚ್ಚ/1 2013 ದಿನಾಂಕ: 10–10–2013ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಲಾಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ತುಷಾರ್ ಗಿರಿನಾಥ್**

ಸರ್ಕಾರದ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಗಣಿ, ಸಪ್ರಕೈ ಮತ್ತು ಜವಳಿ)

## ನೂತನ ಜವಳಿ ನೀತಿ – 2013–2018

**(1) ಪ್ರಸ್ತಾವನೆ**

ಕೈಗಾರಿಕಾ ಉತ್ಪಾದನೆ, ಉದ್ಯೋಗ ಉತ್ಪತ್ತಿ ಮತ್ತು ರಫ್ತು ಸಂಪಾದನೆಗಳ ಮೂಲಕ ಕರ್ನಾಟಕದ ಆರ್ಥಿಕತೆಗೆ ಜವಳಿ ಮತ್ತು ಉಡುಪು ವಲಯವು ನೀಡಿದ ಕೊಡುಗೆಯನ್ನು ***ಅಂಗೀಕರಿಸುವುದು***;

ಸಂಘಟಿತ ಮತ್ತು ವಿಕೇಂದ್ರೀಕೃತ ವಲಯಗಳು, ವ್ಯವಸಾಯ, ಗ್ರಾಮೀಣ ಹಾಗು ನಗರ ಪ್ರದೇಶಗಳಲ್ಲಿ ವಿಶೇಷವಾಗಿ ಮಹಿಳೆಯರಿಗೆ ಮತ್ತು ಅನುಕೂಲವಂತರಿಗೆ ಉದ್ಯೋಗಾವಕಾಶಗಳ ಸೃಷ್ಟಿಯ ವ್ಯಾಪಕ ಸಾಮರ್ಥ್ಯವನ್ನು ***ತಿಳಿದುಕೊಳ್ಳುವುದು***;

ಸಂಘಟಿತ ರೀಟೈಲಿಂಗ್‌ನಲ್ಲಿ ಹೆಚ್ಚುತ್ತಿರುವ ಬಳಸಬಹುದಾದ ಆದಾಯ ಮತ್ತು ಬದಲಾವಣೆಯಿಂದಾಗಿ ಕೋಟಾ ಫೇಸ್ ಔಟ್ ಮತ್ತು ಸ್ವದೇಶಿ ಮಾರುಕಟ್ಟೆಯ ಬಾಬ್ತು ಅಂತಾರಾಷ್ಟ್ರೀಯ ಮಾರುಕಟ್ಟೆಯಲ್ಲಿರುವ ಅವಕಾಶಗಳನ್ನು ***ಪರಿಗಣಿಸುವುದು***;

ಭಾರತ ಸರಕಾರದ ಪ್ರಯತ್ನಗಳ ಪೂರಕವಾಗಿ ರಾಜ್ಯ ಸರಕಾರದ ಪ್ರಗತಿಪರ ನೀತಿಯು ರಾಜ್ಯದ ಜವಳಿ ಮತ್ತು ಉಡುಪಿನ ವಲಯದ ಬೆಳವಣಿಗೆಯ ಮೇಲೆ ಸಹಕ್ರಿಯೆಯ ಪರಿಣಾಮವನ್ನು ಬೀರುವುದೆಂಬುದನ್ನು ***ಮನಗಾಣುವುದು***;

ವಲಯವು ಎದುರಿಸುವ ನ್ಯೂನತೆಗಳು, ಬೆದರಿಕೆಗಳು ಮತ್ತು ಸಮಸ್ಯೆಗಳನ್ನು ***ಪರೀಕ್ಷಿಸುವುದು***;

ಸಾಮರ್ಥ್ಯಗಳು, ಬೆಳವಣಿಗೆಯ ಪ್ರದೇಶಗಳು ಮತ್ತು ಲಭ್ಯವಿರುವ ಅವಕಾಶಗಳನ್ನು ***ಗುರುತಿಸುವುದು***;

ಅವಕಾಶಗಳನ್ನು ಅಭಿವೃದ್ಧಿಗೊಳಿಸಲು ಮತ್ತು ರಾಜ್ಯದಲ್ಲಿ ಜವಳಿ ನೀತಿ "ಸುವರ್ಣ ವಸ್ತ್ರ ನೀತಿ 2008–13" ಅನುಷ್ಠಾನದ ಸ್ವತಂತ್ರ ಮೌಲ್ಯಮಾಪನವನ್ನು ಮಾಡಲು ಉದ್ದೇಶಗಳು, ಗುರಿಗಳು ಮತ್ತು ತಂತ್ರಗಳನ್ನು ಮರುವ್ಯಾಖ್ಯಾನಿಸಲು ಹಾಲಿ ಇರುವ ನೀತಿಯ ಮರು–ನಿರ್ಣಯ ಮಾಡಲು ***ನಿರ್ಧರಿಸುವುದು*** **(ಅನುಬಂಧ – 1)**;

**ಇವುಗಳ ಮೂಲಕ,**

**ಕರ್ನಾಟಕ ಸರಕಾರದ ಜವಳಿ ನೀತಿ – "ನೂತನ ಜವಳಿ ನೀತಿ – 2013–2018"ನ್ನು ಈ ಕೆಳಗಿನಂತೆ ಪ್ರತಿಪಾದಿಸಲಾಗಿರುವುದು.**

**(2) ವರ್ಣನೆ**

ಈ ನೀತಿಯಲ್ಲಿ ಒಳಗೊಳ್ಳುವ ಜವಳಿ ಮತ್ತು ಉಡುಪಿನ ಉದ್ಯಮವು ಮಗ್ಗಪೂರ್ವ ಚಟುವಟಿಕೆಗಳನ್ನೊಳಗೊಂಡ ನೂಲುವಿಕೆ, ನೇಯುವಿಕೆ (ವಿದ್ಯುತ್‌ಮಗ್ಗ ಮತ್ತು ಕೈಮಗ್ಗ), ಹೆಣಿಗೆ, ಪರಿಷ್ಕರಣೆ, ಉಡುಪು ತಯಾರಿಕೆ (ಚರ್ಮದಿಂದ ತಯಾರಿಸಿದ ಉಡುಪುಗಳೂ ಸೇರಿದಂತೆ), ತಾಂತ್ರಿಕ ಜವಳಿ, ಜವಳಿ ಯಂತ್ರ ಉತ್ಪಾದನೆ ಮತ್ತು ಎಲ್ಲಾ ಇತರ ಪೂರಕ ಚಟುವಟಿಕೆಗಳಂತಹ ಕ್ಷೇತ್ರದ ವಿವಿಧ ಮೌಲ್ಯ ಸರಣಿಯ ಚಟುವಟಿಕೆಗಳಲ್ಲಿ ತೊಡಗಿರುವ ಘಟಕಗಳನ್ನು ಒಳಗೊಳ್ಳುವುದು.

**(3) ದೂರದೃಷ್ಟಿ**

(a) ಕರ್ನಾಟಕದ ಜವಳಿ ಮತ್ತು ಉಡುಪಿನ ಕ್ಷೇತ್ರವನ್ನು ಅಂತರಾಷ್ಟ್ರೀಯವಾಗಿ ಸ್ಪರ್ಧಾತ್ಮಕವಾದ ಹೆಚ್ಚಿನ ಮೌಲ್ಯಗಳು ಸೇರಿದ ಉತ್ಪನ್ನಗಳ ಉತ್ಪಾದಕವಾಗಿ ಸ್ಥಾಪಿಸುವುದು, ತನ್ಮೂಲಕ ಬೆಳೆಯುತ್ತಿರುವ ಸ್ವದೇಶಿ ಮತ್ತು ಅಂತರಾಷ್ಟ್ರೀಯ ಮಾರುಕಟ್ಟೆಯಲ್ಲಿ ಪ್ರಬಲ ಅಸ್ತಿತ್ವವನ್ನು ಕಾಪಾಡಿಕೊಳ್ಳುವುದು ಹಾಗೂ ರಾಜ್ಯದ ಸುಸ್ಥಿರ ಉದ್ಯೋಗಾವಕಾಶ ಮತ್ತು ಆರ್ಥಿಕ ಬೆಳವಣಿಗೆಗೆ ಕೊಡುಗೆ ನೀಡುವುದು.

(b) ಬಂಡವಾಳ ಹೂಡಿಕೆ, ತಂತ್ರಜ್ಞಾನ ವರ್ಗಾವಣೆ, ಕೌಶಲ್ಯ ಉನ್ನತೀಕರಣ ಮತ್ತು ಸಹಾಯಹಸ್ತದ ಮೂಲಕ ರಾಜ್ಯದಲ್ಲಿ ಜವಳಿ ಕೈಗಾರಿಕೆಯ ಮೌಲ್ಯ ಸರಣಿಯನ್ನು ಭದ್ರಗೊಳಿಸುವುದು.

**(4) ಉದ್ದೇಶಗಳು**

(a) ಸಂತುಲಿತ ಪ್ರಾದೇಶಿಕ ಅಭಿವೃದ್ಧಿಯ ಮೇಲೆ ಪ್ರಾಮುಖ್ಯತೆಯೊಂದಿಗೆ ಫೈಬರ್‌ನಿಂದ ಪೂರ್ಣಗೊಂಡ ಉತ್ಪನ್ನಗಳವರೆಗೆ ಸಂಪೂರ್ಣ ಜವಳಿ ಮೌಲ್ಯ ಸರಣಿಯಲ್ಲಿ ಉನ್ನತ ಮತ್ತು ಸುಸ್ಥಿರ ಉನ್ನತಿಯನ್ನು ಸಾಧಿಸುವುದು.

(b) ಉತ್ಪಾದನೆ, ತಂತ್ರಜ್ಞಾನ ಮತ್ತು ಸಂಶೋಧನೆ & ಅಭಿವೃದ್ಧಿಯಂಥ ಪ್ರಮುಖ ಪ್ರದೇಶಗಳಲ್ಲಿ ಹೊಮ್ಮುವ ತಾಂತ್ರಿಕ ಜವಳಿಗಳಿಗೆ ಅನುಕೂಲವನ್ನೊದಗಿಸುವುದು. ರಾಜ್ಯದಲ್ಲಿ ಜವಳಿ ಘಟಕಗಳ ಸುಸ್ಥಿರತೆಯ ಗುರಿಹೊಂದಿರುವ ವಲಯಲ್ಲಿ ಸಂಘಟಿತ ಅಭಿವೃದ್ಧಿಯನ್ನು ಈ ನೀತಿಯು ಪ್ರೋತ್ಸಾಹಿಸುವುದು.

(c) ಕುಶಲ ಮಾನವ ಸಂಪನ್ಮೂಲದೊಂದಿಗೆ ಕೈಗಾರಿಕೆಯನ್ನು ಬೆಂಬಲಿಸುವುದು ಮತ್ತು ನೀತಿಯ ಕಾಲಾವಧಿಯಲ್ಲಿ ಕನಿಷ್ಠ 5 ಲಕ್ಷ ಹೊಸ ಉದ್ಯೋಗಾವಕಾಶಗಳನ್ನು ರಾಜ್ಯದಲ್ಲಿ ಸೃಷ್ಟಿಸುವುದು. ಈ ನೀತಿಯು ನಿರುದ್ಯೋಗಿ ಯುವ ಜನರಿಗಾಗಿ ಕೌಶಲ್ಯ ಅಭಿವೃದ್ಧಿ ಚಟುವಟಿಕೆಗಳನ್ನು ಮತ್ತು ಜವಳಿ ಕ್ಷೇತ್ರದಲ್ಲಿರುವ ಉದ್ಯೋಗಿಗಳಿಗೆ ಕೌಶಲ್ಯದ ಉನ್ನತೀಕರಣವನ್ನು ಬೆಂಬಲಿಸುವುದು.

**(5) ಮಧ್ಯವರ್ತನೆಗೆ ಕೇಂದ್ರೀಕರಣದ ವಿಷಯಗಳು**

ಜವಳಿ ನೀತಿ "ಸುವರ್ಣ ವಸ್ತ್ರ ನೀತಿ 2008–2013" ರಲ್ಲಿ ಮಧ್ಯವರ್ತನೆಯ ಕೇಂದ್ರೀಕರಣದ ವಿಷಯಗಳು ಕೆಳಗಿನಂತಿದ್ದವು:

(a) ಜವಳಿ ಮೌಲ್ಯ ಸರಣಿಯ ಚಟುವಟಿಕೆಗಳನ್ನು ಬಲಪಡಿಸುವುದು

(b) ತಾಂತ್ರಿಕ ಜವಳಿ

(c) ಜವಳಿ ಮತ್ತು ಉಡುಪಿನ ಘಟಕಗಳ ಭೌಗೋಳಿಕ ಚದರುವಿಕೆ

(d) ಮಾನವ ಸಂಪನ್ಮೂಲ ಅಭಿವೃದ್ಧಿ

(e) ಮೂಲಭೂತ ಸೌಕರ್ಯ ಅಭಿವೃದ್ಧಿ

(f) ಸಂಪೂರ್ಣ ಜವಳಿ ಮೌಲ್ಯ ಸರಣಿಯ ತಾಂತ್ರಿಕ ಉನ್ನತೀಕರಣ

(g) ಸಾಮರ್ಥ್ಯ ರಚನೆ– ಮಾರುಕಟ್ಟೆಯ ಅಭಿವೃದ್ಧಿ, ಬ್ರ್ಯಾಂಡಿಂಗ್, ವಿನ್ಯಾಸದ ಅಭಿವೃದ್ಧಿ & ಉತ್ಪನ್ನ ವೈವಿಧ್ಯೀಕರಣ

(h) ಸಂಸ್ಥೆಯ ಅಭಿವೃದ್ಧಿ

(i) ಮಾನದಂಡಗಳು ಮತ್ತು ಅನುವರ್ತನೆಗಳು

ಸಮೂಹ ಆಧಾರಿತ ಅಭಿವೃದ್ಧಿ ಕಾರ್ಯತಂತ್ರದ ಮೂಲಕ ಮೇಲಿನ ಎಲ್ಲಾ ಮಧ್ಯವರ್ತನೆಗಳನ್ನು ಯೋಜಿಸಲಾಗಿದೆ / ಕಾರ್ಯಗತಗೊಳಿಸಲಾಗಿದೆ.

ಈ ಕೆಳಗಿನ ಉಪಕ್ರಮಗಳನ್ನು ಕರ್ನಾಟಕ ಜವಳಿ ನೀತಿ 2008– 2013 ರಿಂದ ತೆಗೆದುಕೊಳ್ಳಲಾಗಿದೆ, ಹಿಂದಿನ ನೀತಿಯ ಕಿರುನೋಟವನ್ನು **ಅನುಬಂಧ 1** ರಲ್ಲಿ ತೋರಿಸಿರುವುದು. ಉಪಕ್ರಮಗಳು ಉತ್ತಮ ಫಲಿತಾಂಶವನ್ನು ನೀಡಿರುವುದರಿಂದ, ಅದನ್ನೇ ಹೊಸ ಜವಳಿ ನೀತಿ 2013–2018 ರಲ್ಲಿ ಸೂಕ್ತ ಪರಿವರ್ತನೆಗಳಿಂದ ಮುಂದುವರಿಸಲಾಗುವುದು.

(a) ಜವಳಿ ಮೌಲ್ಯ ಸರಣಿಯ ಚಟುವಟಿಕೆಗಳನ್ನು ಬಲಪಡಿಸುವುದು:

(i) ಕರ್ನಾಟಕವು ಸಿದ್ಧ ಉಡುಪಿನಲ್ಲಿ ಪ್ರಬಲವಾಗಿದ್ದರೂ, ಅಭಿವೃದ್ಧಿಯ ದ್ವಿನೀತಿ ವಿಧಾನದ ಮೇಲೆ ನೀತಿಯು ಕೇಂದ್ರೀಕರಿಸುವುದು. ಅಂದರೆ ಅಸ್ತಿತ್ವದಲ್ಲಿರುವ ಮೌಲ್ಯ ಸರಣಿಯ ಚಟುವಟಿಕೆಗಳನ್ನು ದೃಢಪಡಿಸುವುದು ಮತ್ತು ಮೌಲ್ಯ ಸರಣಿಯ ಚಟುವಟಿಕೆಗಳಿಗಾಗಿ ಸೌಕರ್ಯಗಳನ್ನು ರಚಿಸಿ ಅಂತರವನ್ನು ತುಂಬಿಸುವುದು. ಹಾಗೆ ಮಾಡಲು ಜವಳಿ ನೀತಿಯು ಎಲ್ಲಾ ಅತ್ಯಗತ್ಯವಾದ ಮೌಲ್ಯ ಸರಣಿಯ ಚಟುವಟಿಕೆಗಳಾದಂತಹ ನೂಲುವಿಕೆ, ಮಗ್ಗಪೂರ್ವ ಚಟುವಟಿಕೆಗಳು, ನೇಯುವುದು (ಕೈಮಗ್ಗ ಮತ್ತು ವಿದ್ಯುತ್ ಮಗ್ಗ), ಹೆಣಿಗೆ, ಸಂಸ್ಕರಣೆ, ಸಿದ್ಧಉಡುಪು, ತಾಂತ್ರಿಕ ಜವಳಿ ಮತ್ತು ಜವಳಿ ಯಂತ್ರ ಉತ್ಪಾದನೆಯೊಂದಿಗೆ ಇತರ ಬೆಂಬಲಿಸುವ ಪೂರಕ ಚಟುವಟಿಕೆಗಳ ಸಾಮರ್ಥ್ಯವನ್ನು ವರ್ಧಿಸುವುದು ಮತ್ತು ದೃಢಪಡಿಸುವುದು.

(ii) ನೀತಿ ಅವಧಿಯ ಸಂದರ್ಭದಲ್ಲಿ ಹೂಡಿಕೆಗಳನ್ನು ಜವಳಿ ಪಾರ್ಕುಗಳು, ಬೃಹತ್ ಯೋಜನೆಗಳು, ಏಕೀಕೃತ ಘಟಕಗಳು ಮತ್ತು ಎಂಎಸ್‌ಎಂಇ ಘಟಕಗಳ ರೂಪದಲ್ಲಿ ಜವಳಿಯ ಎಲ್ಲಾ ಉಪ ಕ್ಷೇತ್ರಗಳಲ್ಲಿ ತರಲಾಗುವುದು. ಸೌಕರ್ಯಗಳನ್ನು ಜವಳಿ ಮೌಲ್ಯ ಸರಣಿಯ ಉದ್ದಕ್ಕೂ ರಚಿಸಲಾಗಿದೆ; ಬೃಹತ್‌ರಾಷ್ಟ್ರ ಮತ್ತು ಗುಜರಾತ್‌ನಂತಹ ಇತರ ಸಾಂಪ್ರದಾಯಿಕವಾಗಿ ಪ್ರಬಲವಾಗಿರುವ ರಾಜ್ಯಗಳಲ್ಲಿ ಪ್ರಮಾಣ ಮತ್ತು ಪರಿಸರ ವ್ಯವಸ್ಥೆಯು ಬೃಹತ್ ಜವಳಿ ಘಟಕಗಳನ್ನು ಆಕರ್ಷಿಸುವುದು.

(iii) ಸಹಕಾರಿ ನೂಲುವಿಕೆ ಕ್ಷೇತ್ರ ಕಾರ್ಖಾನೆಗಳ ವ್ಯವಸ್ಥೆಯ ಮೂಲಕ ಒಂದು ಹಂತದಲ್ಲಿ ರಾಜ್ಯದಲ್ಲಿ ಸ್ಪಿನ್ನಿಂಗ್ ಕ್ಷೇತ್ರವು ಸ್ವಲ್ಪ ದೃಢವಾಗಿತ್ತು. ಕಾಲಾಂತರದಲ್ಲಿ, ಕ್ಷೇತ್ರವು ವಿವಿಧ ತೊಂದರೆಗಳನ್ನು ಕಂಡಿತು ಮತ್ತು ಕಾರ್ಖಾನೆಗಳನ್ನು ಒಂದೋ ಸ್ಥಗಿತಗೊಳಿಲಾಯಿತು ಅಥವಾ ವಿವಿಧ ತೊಂದರೆಗಳಲ್ಲಿ ಕೆಲಸ ನಿರ್ವಹಿಸುವಂತಾಯಿತು. ನೂತನ ಉತ್ಪಾದನಾ ಸಾಮರ್ಥ್ಯಗಳ ನೂಲುವಿಕೆ ಕಾರ್ಖಾನೆಗಳ ರಚನೆಗಾಗಿ ಒಂದು ವಿಶೇಷ **"ನೂಲುವಿಕೆ ಕ್ಷೇತ್ರ ಪುನರ್ವಸತಿ ಪ್ಯಾಕೇಜ್"** ನ ಮೂಲಕ ಸಹಕಾರಿ ಕ್ಷೇತ್ರದ ನೂಲುವಿಕೆ ಕಾರ್ಖಾನೆಗಳ ಕ್ಷೇಮವನ್ನು ಪ್ರೋತ್ಸಾಹಿಸಲು ಬೆಂಬಲ ನೀಡಲಾಗುವುದು. ನೂಲುವಿಕೆ ಕ್ಷೇತ್ರ, ಅದರ ತೊಂದರೆಗಳು ಮತ್ತು ನೂಲುವಿಕೆ ಕ್ಷೇತ್ರ ಪ್ರಸ್ತಾಪನೆಗಾಗಿ ವಿಶೇಷ ಪುನರ್ವಸತಿ ಪ್ಯಾಕೇಜ್‌ನ ಒಂದು ಟಿಪ್ಪಣಿಯನ್ನು **ಅನುಬಂಧ 2** ರಲ್ಲಿ ತೋರಿಸಿರುವುದು.

(iv) ಅಗತ್ಯವಿರುವ ಪ್ರಮಾಣದಲ್ಲಿ ಉತ್ತಮ ಗುಣಮಟ್ಟದ ಉಡುಪುಗಳನ್ನು ಪೂರೈಸುವಂತೆ ಪವರ್‌ಲೂಮ್ ಕ್ಷೇತ್ರವು ಉತ್ಪಾದನಾ ತಂತ್ರಜ್ಞಾನಗಳನ್ನು ಆಧುನೀಕರಿಸಲು ಬೆಂಬಲ ನೀಡುವುದು ಮತ್ತು ದೃಢಪಡಿಸುವುದು. ಕರ್ನಾಟಕದಲ್ಲಿ ಕೈಮಗ್ಗ ಕ್ಷೇತ್ರವು ವಿಶೇಷವಾಗಿ ರೇಷ್ಮೆ ಸೀರೆಗಳು ಮತ್ತು ಸಾಂಪ್ರದಾಯಿಕ ಕೈಮಗ್ಗ ಸೀರೆಗಳು ಮತ್ತು ಉಡುಗೆಗಳಲ್ಲಿ ಪ್ರಬಲವಾದ ಭೌಗೋಳಿಕ ಸೂಚಕಗಳನ್ನು ಸೃಷ್ಟಿಸಿರುವುದು. ಆದರೆ ಆಧುನೀಕರಣ, ಅಗತ್ಯ ಪ್ರಮಾಣದಲ್ಲಿ ಸಾಲದ ಲಭ್ಯತೆ ಮತ್ತು ಉತ್ಪನ್ನದ ಮಾರಾಟಗೊಳ್ಳುವಿಕೆಯ ಪತನದ ಕಾರಣ, ಕೈಮಗ್ಗ ಕ್ಷೇತ್ರದಲ್ಲಿ ಕಾರ್ಯಸಾಧ್ಯತೆಯನ್ನು ಹೆಚ್ಚಿಸಲು ಹೊಸ ನೀತಿಯ ಮೂಲಕ ಬೆಂಬಲಿಸಬೇಕಾಗುವುದು. ಹೊಸ ನೀತಿಯ ಅನುಸಾರ ಬೆಂಬಲಿಸಬೇಕಾದ ಕೈಮಗ್ಗ ವಲಯದ ನಿರ್ದಿಷ್ಟ ಮಧ್ಯವರ್ತನೆಗಳು ಈ ಕೆಳಗಿನಂತಿವೆ:

(aa) ಕ್ರೆಡಿಟ್ ಲಿಂಕ್ಡ್ ಬಂಡವಾಳ ಅನುದಾನ

(bb) ಬಡ್ಡಿ ಅನುದಾನ

(cc) ಸಾಮಾನ್ಯ ತ್ಯಾಜ್ಯಜಲದ ಉಪಚಾರ ಸ್ಥಾವರ (ಕಾಮನ್ ಎಫ್ಲೂಎಂಟ್ ಟ್ರೀಟ್ಮೆಂಟ್ ಪ್ಲಾಂಟ್)

(dd) ವ್ಯಾಪಾರೋದ್ಯಮ, ಬ್ರ್ಯಾಂಡಿಂಗ್ & ಉತ್ಪನ್ನ ವೈವಿಧ್ಯೀಕರಣಕ್ಕಾಗಿ ಸಾಮರ್ಥ್ಯ ವರ್ಧಿಸಲು ಬೆಂಬಲ ನೀಡುವುದು

(ee) ಮಾನವ ಸಂಪನ್ಮೂಲ ಅಭಿವೃದ್ಧಿ & ಕೌಶಲ್ಯಗಳ ಉನ್ನತೀಕರಣ

**ಕೈಮಗ್ಗ ಕ್ಷೇತ್ರವನ್ನು ಬೆಂಬಲಿಸುವ ಸಲುವಾಗಿ, ನೀತಿ ಅವಧಿಯಲ್ಲಿ ಒಟ್ಟು ಆಯೋಜಿತ ವ್ಯಯದಲ್ಲಿ ಶೇ.5% ನ್ನು ಮೀಸಲಿಡುವುದು**

**ಟಿಪ್ಪಣಿ:** *ಕರ್ನಾಟಕ ಸರಕಾರವು, ಸೂಕ್ತ ಬಜೆಟ್‌ಗಳೊಂದಿಗೆ (ಸುಮಾರು ರೂ. 125– ರೂ. 175 ಕೋಟಿಗಳು, ವಾರ್ಷಿಕವಾಗಿ) ಜಿಲ್ಲಾ ವಲಯ ಯೋಜನೆಗಳು, ರಾಜ್ಯದ ಯೋಜನೆಗಳು ಮತ್ತು ಕೇಂದ್ರ ಯೋಜನೆಗಳ ಮೂಲಕ ಅಸಂಘಟಿತ ಕ್ಷೇತ್ರಗಳಲ್ಲಿ ವಿದ್ಯುತ್ ಮಗ್ಗ ಮತ್ತು ಕೈಮಗ್ಗ ಕ್ಷೇತ್ರ ಘಟಕಗಳನ್ನು ಬೆಂಬಲಿಸುವುದನ್ನು ಮುಂದುವರಿಸುವುದು.* ***ಅನುಬಂಧ 3*** *ರಲ್ಲಿ ತೋರಿಸಿರುವ ಅನುಸಾರ ವಿವಿಧ ಯೋಜನೆಗಳ ಕೆಳಗೆ ಆಯವ್ಯಯದ ನಿಬಂಧನೆಗಳನ್ನು ಮಾಡಿರುವುದು. ಹೊಸ ಜವಳಿ ನೀತಿಯು ವಿದ್ಯುತ್ ಮಗ್ಗ ಮತ್ತು ಕೈಮಗ್ಗ ಘಟಕಗಳನ್ನು ಬೆಂಬಲಿಸುವುದನ್ನು ಮುಂದುವರಿಸುವುದು.*

(v) ಜವಳಿ ಮೌಲ್ಯ ಸರಣಿಯಲ್ಲಿ ಸಂಸ್ಕರಣೆಯು ಒಂದು ದುರ್ಬಲ ಸಂಪರ್ಕವಾಗಿರುವುದರಿಂದ, ಸಂಸ್ಕರಣೆಯು ಉತ್ಪಾದನಾ ಸ್ಥಾಪನೆಯ ಅವಿಭಾಜ್ಯ ಭಾಗವೆಂದು ಪ್ರಸ್ತಾಪಿಸಿದ ಘಟಕಗಳನ್ನು ಆಕರ್ಷಿಸಲು ಕಳೆದ ನೀತಿಗೆ ಸಾಧ್ಯವಾಗಿರುವುದು. ಆಂತರಿಕ ಬಳಕೆಗಾಗಿ ಅವಿಭಾಜ್ಯ ಸಂಸ್ಕರಣೆ ಸೌಕರ್ಯಗಳನ್ನು ರಚಿಸುವ ಯೋಜನೆಯ ಪ್ರಸ್ತಾಪನೆಗಳನ್ನು ಬೆಂಬಲಿಸುವುದನ್ನು ಕರ್ನಾಟಕ ಸರಕಾರವು ಮುಂದುವರಿಸುವುದು. ಸೂಕ್ತ ಬೆಂಬಲದೊಂದಿಗೆ ರಾಜ್ಯದಲ್ಲಿ ಸ್ಥಾಪಿಸಲಾದ ಯೋಜನೆಗಳ ಗುಣಗಳು ಮತ್ತು ಕಾರ್ಯಸಾಧನೆಯ ಮೇಲೆ ನಿರ್ದಿಷ್ಟ ಸಂಸ್ಕರಣೆಯ ಪ್ರಸ್ತಾಪಗಳು ಅವಲಂಬಿಸಿರುವುದು.

(vi) ರಾಜ್ಯದಲ್ಲಿ ಸಿದ್ಧಉಡುಪು ಕ್ಷೇತ್ರದ ಹೂಡಿಕೆಗಳಲ್ಲಿ ಬೆಳವಣಿಗೆಯನ್ನು ವೀಕ್ಷಿಸಲಾಗಿದೆ ಮತ್ತು ಯಾವುದೇ ಕುಸಿತ ಕಂಡು ಬಂದಿಲ್ಲ. ಉಡುಪಿನ ಸಾಮರ್ಥ್ಯವು ತೀವ್ರವಾಗಿ ಅಧಿಕವಾಗಿರುವುದು. ರಾಜ್ಯದ 20 ಜಿಲ್ಲೆಗಳಲ್ಲಿ ಸುಮಾರು 6500 ಘಟಕಗಳು (ಬೃಹತ್, ಮಧ್ಯಮ ಮತ್ತು ಸಣ್ಣ) ಸಂಘಟಿತ ಮತ್ತು ಅಸಂಘಟಿತ ವಲಯದ ಉಪಸ್ಥಿತಿಯಲ್ಲಿರುವುದು. ಅಧಿಕ ಸಂಖ್ಯೆಯ ಜನರಿಗೆ ಉದ್ಯೋಗಾವಕಾಶ ನೀಡಲು ಸಿದ್ಧ ಉಡುಪು ಕ್ಷೇತ್ರಕ್ಕೆ ಸಾಧ್ಯವಿರುವುದು.

(vii) ಹೊಸ ನೀತಿಯು ಅಭಿವೃದ್ಧಿಯ ದ್ವಿ–ನೀತಿ ವಿಧಾನವನ್ನು ಅನುಸರಿಸುವುದನ್ನು ಮುಂದುವರಿಸುವುದು ಅಂದರೆ ಮೌಲ್ಯ ಸರಣಿಯ ಚಟುವಟಿಕೆಗಳಿಗಾಗಿ ಅಂತರವನ್ನು ಭರ್ತಿಗೊಳಿಸಲು ಮತ್ತು ಸೌಕರ್ಯಗಳನ್ನು ರಚಿಸಲು ನೂಲುವಿಕೆ, ಸಂಘಟಿತ ಮತ್ತು ಅಸಂಘಟಿತ ನೇಯುವಿಕೆ (ವಿದ್ಯುತ್ ಮಗ್ಗ ಮತ್ತು ಕೈಮಗ್ಗ ಕ್ಷೇತ್ರ) ಮತ್ತು ಸಂಸ್ಕರಣೆಯಲ್ಲಿ ಅಸ್ತಿತ್ವದಲ್ಲಿರುವ ಮೌಲ್ಯ ಸರಣಿ ಚಟುವಟಿಕೆಗಳನ್ನು ದೃಢಪಡಿಸುವುದು.

**ಕರ್ನಾಟಕದಲ್ಲಿ ಅಧಿಕ ಹತ್ತಿ ಬೆಳೆಯುವ ಪ್ರದೇಶಗಳು ಮತ್ತು ಅಧಿಕ ಸಿದ್ಧಉಡುಪು ಘಟಕಗಳಿರುವುದರಿಂದ, ಫೈಬರ್‌ನಿಂದ ಸಿದ್ಧಉಡುಪಿನ ತನಕ ಪ್ರತಿ ಹಂತದಲ್ಲಿ ಮೌಲ್ಯ ವರ್ಧನೆಯನ್ನು ಕೈಗೊಂಡು ರಾಜ್ಯದೊಳಗಿನ ಸಂಬಂಧಿತ ಜವಳಿ ಚಟುವಟಿಕೆಗಳನ್ನು ಉತ್ತೇಜಿಸುವುದು ಜವಳಿ ನೀತಿಯ ಪ್ರಮುಖ ಕೇಂದ್ರಬಿಂದುವಾಗಿರುವುದು.**

**(b) ತಾಂತ್ರಿಕ ಜವಳಿ:**

ಸಾಂಪ್ರದಾಯಿಕ ಜವಳಿ ಹೊರತಾಗಿ, ಜವಳಿ ಮೌಲ್ಯ ಸರಣಿಯಲ್ಲಿ ಒಂದು ಪ್ರಧಾನ ಉದಯೋನ್ಮುಖ ಕ್ಷೇತ್ರವೆಂದು ಪರಿಗಣಿಸಲಾದ ತಾಂತ್ರಿಕ ಜವಳಿ ಕ್ಷೇತ್ರದ ಮೇಲೆ ನೀತಿಯು ವಿಶೇಷ ಗಮನ ಹರಿಸುವುದು. ನೀತಿಯ ಅವಧಿ 2008–2013 ರ ಅವಧಿಯಲ್ಲಿ ರೂ.1480 ಕೋಟಿಗಳ ಹೂಡಿಕೆಗಳನ್ನು ತಾಂತ್ರಿಕ ಜವಳಿ ಕ್ಷೇತ್ರದಲ್ಲಿ ಹೂಡಲಾಗಿರುವುದು. ವರ್ಷಂಪ್ರತಿ ತಾಂತ್ರಿಕ ಜವಳಿ ಉದ್ಯಮದ ಮಹತ್ವ ಮತ್ತು ಬೆಳವಣಿಗೆಯ ಸಾಮರ್ಥ್ಯ ಅರಿತುಕೊಂಡು ತಾಂತ್ರಿಕ ಜವಳಿ ಕ್ಷೇತ್ರದಲ್ಲಿ ಉದ್ಯಮಗಳಿಗೆ ಬೆಂಬಲವನ್ನು ನೀಡಲು ಮುಂಬರುವ ನೀತಿಯು ಕೇಂದ್ರೀಕರಿಸುವುದು.

**(c) ಜವಳಿ ಮತ್ತು ಸಿದ್ಧಉಡುಪಿನ ಘಟಕಗಳ ಭೌಗೋಳಿಕ ಚದರುವಿಕೆ:**

(i) ಪ್ರಾದೇಶಿಕ ಅಸಮತೋಲನ ಮತ್ತು ರಾಜ್ಯದ ಹಿಂದುಳಿದ ಪ್ರದೇಶಗಳಲ್ಲಿ ಉದ್ಯೋಗವನ್ನು ಉತ್ತೇಜಿಸುವ ಸಲುವಾಗಿ, ನೀತಿಯು ಗುರುತಿಸಲ್ಪಟ್ಟ ಪ್ರದೇಶಗಳಲ್ಲಿ ಜವಳಿ ಮತ್ತು ಸಿದ್ಧ ಉಡುಪಿನ ಘಟಕಗಳ ಭೌಗೋಳಿಕ ಚದರುವಿಕೆಯ ಮೇಲೆ ಕೇಂದ್ರೀಕರಿಸಿತ್ತು. ಜಿಲ್ಲೆಗಳು / ತಾಲೂಕುಗಳ ಹಿಂದುಳಿದಿರುವ ಪ್ರಮಾಣವನ್ನು ಅವಲಂಬಿಸಿ ರಾಜ್ಯವನ್ನು ಮೂರು ವಲಯಗಳಾಗಿ ವರ್ಗೀಕರಿಸಲಾಗಿತ್ತು.

(ii) ಶಿವಮೊಗ್ಗ, ಮಂಡ್ಯ, ಬಿಜಾಪುರ, ಹಾಸನ, ಗುಲ್ಬರ್ಗಾ, ದೊಡ್ಡಬಳ್ಳಾಪುರ ಮತ್ತು ಬಳ್ಳಾರಿಯಂತಹ ಆಂತರಿಕ ಪ್ರದೇಶಗಳನ್ನೊಳಗೊಂಡಂತೆ ರಾಜ್ಯದ ವಿವಿಧ ಭಾಗಗಳಲ್ಲಿ ಬೃಹತ್ ಯೋಜನೆಗಳು ಮತ್ತು ಸಮೂಹ ಆಧಾರಿತ ಪಾರ್ಕುಗಳನ್ನು ಅಭಿವೃದ್ಧಿಗೊಳಿಸಲಾಗಿರುವುದು.

(iii) ಕೈಮಗ್ಗ ಮತ್ತು ಜವಳಿ ಇಲಾಖೆಯ ಮೂಲಕ ಕರ್ನಾಟಕ ಸರಕಾರವು ಜವಳಿ ನೀತಿಯಡಿ ಯೋಜನೆಗಳನ್ನು ಅನುಷ್ಠಾನಗೊಳಿಸಿದೆ. (ಸುವರ್ಣ ವಸ್ತ್ರ ನೀತಿ 2008–13)

(iv) ಮುಂಬರುವ ನೀತಿಯು ಬೃಹತ್‌ನಗರ ಪಾಲಿಕೆ ಮತ್ತು ನಗರಸಭೆ ಮಿತಿಗಳಲ್ಲಿ ಉದ್ಯಮ ಅಭಿವೃದ್ಧಿ ದಟ್ಟಣೆಯನ್ನು ಕಡಿಮೆಗೊಳಿಸುವತ್ತ ಗಮನಹರಿಸುವುದು ಹಾಗೂ ಅದನ್ನು ಅಂತಹ ಮಿತಿಗಳ ಹೊರಗೆ ಬೆಳೆಸುವುದು.

**(d) ಮಾನವ ಸಂಪನ್ಮೂಲ ಅಭಿವೃದ್ಧಿ:**

(i) ಜವಳಿ ಕ್ಷೇತ್ರದ ಅಭಿವೃದ್ಧಿಗಾಗಿ ಭೌತಿಕ ಮೂಲ ಸೌಕರ್ಯವಲ್ಲದೆ ಕುಶಲ ಕಾರ್ಮಿಕ ಲಭ್ಯತೆಯ ಅಗತ್ಯವಿರುವುದು. ಉದ್ಯಮದ ಕುಶಲ ಕಾರ್ಮಿಕರ ಅವಶ್ಯಕತೆಯ ಅನುಗುಣವಾಗಿ, ನೀತಿಯಡಿ ಇಲಾಖೆಯು ರಾಜ್ಯದ ನಿರುದ್ಯೋಗಿ ಯುವ ಜನರಿಗೆ ತರಬೇತಿ ನೀಡಲು ಮತ್ತು ಉದ್ಯೋಗವನ್ನು ಕಲ್ಪಿಸಲು ಅಸ್ತಿತ್ವದಲ್ಲಿರುವ ಮತ್ತು ಹೊಸ ತರಬೇತಿ ಸಂಸ್ಥೆಗಳನ್ನು ಬೆಂಬಲಿಸಿರುವುದು ಹಾಗೂ ಉತ್ತಮ ಸಂಪರ್ಕಗಳನ್ನು ನೀಡಿ ತರಬೇತುದಾರರ ತರಬೇತಿಯನ್ನು ಆಯೋಜಿಸುವ ಮೂಲಕ ತರಬೇತುದಾರರ ಒಂದು ಉತ್ತಮ ಗುಂಪನ್ನು ರಚಿಸಿ ಮತ್ತು ತರಬೇತಿ ಕಾರ್ಯಕ್ರಮದ ಗುಣಮಟ್ಟವನ್ನು ಖಚಿತಪಡಿಸಲು ಮೌಲ್ಯಮಾಪನ & ಪ್ರಮಾಣೀಕೃತ ಪ್ರಕ್ರಿಯೆಯ ಮೂಲಕ ಕೌಶಲ್ಯದ ಅಂತರಗಳ ಪ್ರಕ್ರಿಯೆಯನ್ನು ದೃಢಗೊಳಿಸುವುದು. ಈ ನೀತಿ ಅವಧಿಯಲ್ಲಿ 5 ಲಕ್ಷ ಉದ್ಯೋಗಾವಕಾಶಗಳನ್ನು ಸೃಷ್ಟಿಸುವ ಗುರಿ ಹೊಂದಿರುತ್ತದೆ.

(ii) ಆದುದರಿಂದ, ನೀತಿಯು ಕುಶಲ ಅಭಿವೃದ್ಧಿ ಉಪಕ್ರಮಗಳಿಗೆ ಬೆಂಬಲ ನೀಡಿರುವುದು. ನೀತಿಯಡಿ ರಾಜ್ಯದ ವಿವಿಧ ಭಾಗದಲ್ಲಿ ಸುಮಾರು 3 ಲಕ್ಷ ಉದ್ಯೋಗಾವಕಾಶಗಳನ್ನು (ಪ್ರತ್ಯಕ್ಷ & ಪರೋಕ್ಷ) ಸೃಷ್ಟಿಸಿರುವುದು. ಕರ್ನಾಟಕ ಸರಕಾರವು ವಿವಿಧ ಕುಶಲ ಅಭಿವೃದ್ಧಿ ಉಪಕ್ರಮಗಳ ಮೂಲಕ ನೀತಿಯ ನೇತೃತ್ವದಲ್ಲಿ 1.17 ಲಕ್ಷ ಫಲಾನುಭವಿಗಳಿಗೆ ತರಬೇತಿ ನೀಡಿರುವುದು.

**(e) ಮೂಲಭೂತಸೌಕರ್ಯ ಅಭಿವೃದ್ಧಿ:**

(i) ನೀತಿ ಅವಧಿಯಲ್ಲಿ ಜಾಗತಿಕವಾಗಿ, ಸ್ಪರ್ಧಾತ್ಮಕವಾಗಿರುವ ಮತ್ತು ರಫ್ತು ಅನುಸರಣೆಯನ್ನು ಪೂರೈಸುವ ಘಟಕಗಳಿಗಾಗಿ ಅಗತ್ಯವಿರುವ ಮೂಲಭೂತ ಸೌಕರ್ಯ ಅಭಿವೃದ್ಧಿಗೆ ಸರಕಾರವು ಸಮೂಹ ಆಧಾರಿತ ಜವಳಿ ಪಾರ್ಕುಗಳು, ಮೆಗಾ ಯೋಜನೆಗಳು ಮತ್ತು ಸಿಇಟಿಪಿ ಗಳು ಇತ್ಯಾದಿಯ ಮೂಲಕ ಬೆಂಬಲ ನೀಡಿರುವುದು. ಬಹುತೇಕ ಮೂಲಭೂತ ಸೌಕರ್ಯ ಅಭಿವೃದ್ಧಿಯು ಏಕೀಕೃತ ಜವಳಿ ಉತ್ಪಾದನಾ ಚಟುವಟಿಕೆಗಳೊಂದಿಗೆ ಜರುಗಿರುವುದು.

(ii) ಅಭಿವೃದ್ಧಿ ತಂತ್ರದ ನೇತೃತ್ವದಲ್ಲಿ ಬೆಂಗಳೂರು ಗ್ರಾಮಾಂತರ, ಗುಲ್ಬರ್ಗಾ, ಬಿಜಾಪುರ, ಬಳ್ಳಾರಿ, ಹಾಸನ, ಶಿವಮೊಗ್ಗ, ಮಂಡ್ಯ ಮತ್ತು ಮೈಸೂರಿನಂತಹ ರಾಜ್ಯದ ವಿವಿಧ ಪ್ರದೇಶಗಳಲ್ಲಿ ಜವಳಿ ಪಾರ್ಕುಗಳು ಮತ್ತು ಮೆಗಾ ಯೋಜನೆಗಳನ್ನು ಸ್ಥಾಪಿಸಿರುವುದು.

(f) **ಸಾಮರ್ಥ್ಯ ರಚನೆ:**

(i) ಜವಳಿ ಮತ್ತು ಸಿದ್ಧ ಉಡುಪು ಕ್ಷೇತ್ರಕ್ಕಾಗಿ ಮೂಲಭೂತಸೌಕರ್ಯ ಅಭಿವೃದ್ಧಿಯ ಹೊರತಾಗಿ ಪ್ರಧಾನವಾಗಿ ಸಮಗ್ರ ಸಾಮರ್ಥ್ಯ ವರ್ಧಕ ಉದ್ದೇಶಕ್ಕಾಗಿ ಮೃದು ಪೂರೈಕೆಗಳೊಂದಿಗೆ ಉದ್ಯಮವನ್ನು ನೀತಿಯು ಬೆಂಬಲಿಸುವುದು.

(ii) ಪ್ರಮಾಣಾನುಗುಣ ಆರ್ಥಿಕತೆಯನ್ನು ಪಡೆಯಲು ಒಗ್ಗೂಡಿಸುವ ಆಧಾರದ ಮೇಲೆ ಸಾಮರ್ಥ್ಯ ವರ್ಧಕ ಉಪಕ್ರಮಗಳನ್ನು ನೀಡಿರುವುದು. ನೀತಿ ಅವಧಿಯಲ್ಲಿ ಬೆಂಬಲಿಸಿದ ಸಾಮರ್ಥ್ಯ ವರ್ಧಕ ಉಪಕ್ರಮಗಳು ಈ ಕೆಳಗಿನಂತಿವೆ:

(aa) **ವಾಣಿಜ್ಯೋದ್ಯಮ ಅಭಿವೃದ್ಧಿ ಕಾರ್ಯಕ್ರಮ (ಇಡಿಪಿ):** ಉದಯೋನ್ಮುಖ ಸಮರ್ಥ ಉದ್ಯಮಿಗಳ ಮೂಲಕ ಸಣ್ಣ ಮತ್ತು ಮಧ್ಯಮ ಜವಳಿ ಕೈಗಾರಿಕೆಗಳಲ್ಲಿ (ಎಸ್‌ಎಮ್‌ಇ) ಒಂದು ಗಮನಾರ್ಹ ಬೆಳವಣಿಗೆ ಮತ್ತು ಅಭಿವೃದ್ಧಿಯನ್ನು ಪಡೆಯಲು ಇಲಾಖೆಯಿಂದ ಇಡಿಪಿಗಳನ್ನು ಆಯೋಜಿಸಿರುವುದು. ಈ ಕಾರ್ಯಕ್ರಮಗಳು ಜವಳಿ ನೀತಿಯ ಅನುಕೂಲಗಳನ್ನು ಪ್ರಚಾರ ಮಾಡುವುದರಿಂದ ಮತ್ತು ಜವಳಿ ಕ್ಷೇತ್ರದ ತಾಂತ್ರಿಕ ವಿಭಾಗದ ಮೇಲೆ ಜಾಗೃತಿ ಮೂಡಿಸುವುದರ ಹೊರತಾಗಿ ಹೊರಬರುತ್ತಿರುವ ಉದ್ಯಮಿಗಳಿಗೆ ಕೌಶಲ್ಯ ಮತ್ತು ನಡವಳಿಕೆಯ ಪ್ರಾಮುಖ್ಯತೆಯೊಂದಿಗೆ ವಾಣಿಜ್ಯೋದ್ಯಮದ ಗುಣಗಳ ಮೂಲಭೂತ ಜ್ಞಾನವನ್ನು ನೀಡಿರುವುದು. ಇಡಿಪಿಯನ್ನು ರಾಜ್ಯದ ಎಲ್ಲಾ 30 ಜಿಲ್ಲೆಯಲ್ಲಿ ಕೈಗೊಳ್ಳಲಾಗಿದ್ದು ಸುಮಾರು 900 ಉದ್ಯಮಿಗಳು ಪ್ರಯೋಜನವನ್ನು ಪಡೆದಿರುತ್ತಾರೆ.

(bb) **ತರಬೇತುದಾರರ ತರಬೇತಿ (ಟಿಓಟಿ):** ಇಲಾಖೆಯು ರಾಜ್ಯದುದ್ದಕ್ಕೂ ತರಬೇತಿ ಕಾರ್ಯಕ್ರಮಗಳನ್ನು ನಡೆಸಲು ತರಬೇತಿದಾರರ ಸಾಮರ್ಥ್ಯವನ್ನು ಹೆಚ್ಚಿಸಲು ತರಬೇತಿದಾರರ ತರಬೇತಿಯನ್ನು (ಟಿಓಟಿ) ರೂಪಿಸಿರುವುದು ಮತ್ತು ನಡೆಸಿರುವುದು.

(cc) **ಅಂತಾರಾಷ್ಟ್ರೀಯ ವ್ಯಾಪಾರ ಪ್ರದರ್ಶನ/ ವಸ್ತುಪ್ರದರ್ಶನಗಳು:** ಇಲಾಖೆಯು ವಿವಿಧ ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಮೇಳಗಳಲ್ಲಿ ಮತ್ತು ವ್ಯಾಪಾರ ಪ್ರದರ್ಶನಗಳಲ್ಲಿ ಪಾಲ್ಗೊಂಡಿರುವುದು.

(dd) **ಕಾರ್ಯಾಗಾರಗಳು:** ಉದ್ಯಮದ ಲಾಭಕ್ಕಾಗಿ ಇಲಾಖೆಯು ಕೌಶಲ್ಯ ಅಭಿವೃದ್ಧಿ ಕೇಂದ್ರಗಳ ಸ್ಥಾಪನೆ ಮತ್ತು ತಾಂತ್ರಿಕ ಜವಳಿ ಕಾರ್ಯಾಗಾರಗಳನ್ನು ಆಯೋಜಿಸಿರುವುದು.

(g) **ಮಾನವ / ಸಾಮಾಜಿಕ ಸೂಚಕ ಸುಧಾರಣೆಗಳು:**

ಮಾನವ / ಸಾಮಾಜಿಕ ಸೂಚಕ ಸುಧಾರಣೆಗಾಗಿ, ಉದ್ಯೋಗಿಗಳಿಗೆ ಉತ್ತಮ ದುಡಿಮೆ ಸ್ಥಿತಿಗಳನ್ನು ಒದಗಿಸುವಲ್ಲಿ ಸುಧಾರಣೆಗಳನ್ನು ಮಾಡಲು ಫಲಾತ್ಮಕ ಕ್ರಮಗಳನ್ನು ತೆಗೆದುಕೊಳ್ಳುವ ಉದ್ಯಮಗಳಿಗೆ ಬೆಂಬಲ ನೀಡುವತ್ತ ಈ ನೀತಿಯು ಗಮನವಹಿಸುವುದು. ಪ್ರೋತ್ಸಾಹ ಧನದ ನಿರ್ದಿಷ್ಟ ಭಾಗವನ್ನು ಅಂತಹ ಸುಧಾರಣೆಗಳನ್ನು ಅಳೆಯಲು ನಿಗದಿಪಡಿಸಿದ ನಿಯಮಾವಳಿಗಳ ಅನುಸರಣೆಯನ್ನು ಸಾಧಿಸಿದ ನಂತರ ನೀಡಲಾಗುವುದು.

(h) **ಪೂರ್ಣ ಜವಳಿ ಮೌಲ್ಯ ಸರಣಿಯ ತಂತ್ರಜ್ಞಾನ ಉನ್ನತ್ತೀಕರಣ:**

(i) ಭಾರತ ಸರ್ಕಾರದ ಟಿ.ಯು.ಟಫ್.ಎಸ್ ಅನುಸಾರ ಸಹಾಯಧನ ಪಡೆಯಲು ಬೆಂಬಲ ಮತ್ತು ಉತ್ತೇಜನದ ಹೊರತಾಗಿ, ಉದ್ಯಮಿಗಳು ತಮ್ಮ ಉತ್ಪಾದನಾ ತಾಂತ್ರಿಕತೆಗಳನ್ನು ಆಧುನೀಕರಿಸುವ ಸಲುವಾಗಿ ಹೆಚ್ಚುವರಿ ಪ್ರೋತ್ಸಾಹ ಧನವಾಗಿ ಈ ನೀತಿಯು ತಂತ್ರಜ್ಞಾನದ ಉನ್ನತೀಕರಣ, ಗುಣಮಟ್ಟ ಪರೀಕ್ಷಣಾ ಉಪಕರಣಗಳು ಇತ್ಯಾದಿಗಳಿಗಾಗಿ ಬಂಡವಾಳ ಅನುದಾನವನ್ನೂ ನೀಡುವುದು.

(ii) ನೀತಿಯ ಅವಧಿಯಲ್ಲಿ, ಪೂರ್ಣ ಮೌಲ್ಯ ಸರಣಿಯಲ್ಲಿ ತಂತ್ರಜ್ಞಾನದ ಉನ್ನತೀಕರಣವು ಗಮನಾರ್ಹವಾಗಿ ಹೆಚ್ಚಾಗಿದೆ. ತಂತ್ರಜ್ಞಾನದ ಉನ್ನತೀಕರಣ ಮತ್ತು ಉತ್ಪಾದನಾ ಸೌಲಭ್ಯಗಳ ಆಧುನೀಕರಣದಲ್ಲಿ ಹೂಡಿಕೆಗಳನ್ನು ಮಾಡಲಾಗಿದೆ. ಇದರಿಂದಾಗಿ ಮಾರುಕಟ್ಟೆ ಮಾನದಂಡ ಮತ್ತು ಅಗತ್ಯ ಪ್ರಮಾಣಾನುಸಾರವಾಗಿ ಸರಕುಗಳನ್ನು ಪೂರೈಸಲು ಘಟಕಗಳಿಗೆ ಸಹಾಯವಾಗಿದೆ.

(iii) ಕ್ಷೇತ್ರದಲ್ಲಿ ಆಧುನಿಕ ತಂತ್ರಜ್ಞಾನದ ಬಗ್ಗೆ ಅರಿವು ಮೂಡಿಸುವ ಸಲುವಾಗಿ, ಇಲಾಖೆಯು ಉದ್ಯಮಿಗಳಿಗಾಗಿ ರಾಜ್ಯಾದ್ಯಂತ ಇ.ಡಿ.ಪಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರುವುದು.

ಜವಳಿಯ ಮೌಲ್ಯ ಸರಣಿಗಳನ್ನುದ್ದೇಶಿಸುವ ಸಲುವಾಗಿ, ಈ ನೀತಿಯು ಎಲ್ಲಾ ಚಟುವಟಿಕೆಗಳು ಮತ್ತು ಎಲ್ಲಾ ಇತರ ಪೂರಕ ಚಟುವಟಿಕೆಗಳನ್ನು ವ್ಯಾಪಿಸಿದೆ. ಬೆಂಬಲ ನೀಡಲು, ಉದ್ಯಮವು ಅನುಮೋದಿಸಿದ ಎಲ್ಲಾ ದೌರ್ಬಲ್ಯಗಳನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ ಎಂದು ಈ ನೀತಿಯು ಖಚಿತಪಡಿಸಿದೆ. ಉದ್ಯಮದಿಂದ ಒಳ್ಳೆಯ ಪ್ರತಿಕ್ರಿಯೆ ಬಂದಿರುವುದರಿಂದ ಮತ್ತು ಹೆಚ್ಚಿನ ಪ್ರಯತ್ನಗಳನ್ನು ಸೆಳೆಯಲಾಗಿರುವುದರಿಂದ, ಹೊಸ ನೀತಿಯು ಮಧ್ಯವರ್ತನೆಯ ಕೇಂದ್ರೀಕರಣ ಪ್ರದೇಶಗಳೊಂದಿಗೆ ಮುಂದುವರಿಯುವುದು.

(6) **ಸಮೂಹ ಆಧಾರಿತ ಅಭಿವೃದ್ಧಿ ತಂತ್ರ**

(a) ಸಮೂಹ ಆಧಾರಿತ ಅಭಿವೃದ್ಧಿಯು ಎಲ್ಲವನ್ನೂ ಒಳಗೊಳ್ಳುವ ವಲಯದಲ್ಲಿ ಸಂಘಟಿತವಾಗಿ ಘಟಕಗಳಿಗೆ ಬೆಂಬಲ ನೀಡಲು ಪ್ರಯತ್ನಿಸುವ ಒಂದು ವಿಧಾನ. ಈ ವಿಧಾನವು ವಿಭಜಿತ ಪ್ರಯೋಜನಗಳಲ್ಲದೆ ಪೂರ್ಣ ಕೈಗಾರಿಕೋದ್ಯಮಕ್ಕೆ ಪ್ರಯೋಜನವನ್ನೊದಗಿಸುತ್ತದೆ.

(b) ಸಮೂಹ ಅಭಿವೃದ್ಧಿ ಮಾದರಿಯು ಆಧುನಿಕ ಭೌತಿಕ ಮತ್ತು ಸಾಮಾಜಿಕ ಸೌಕರ್ಯಗಳ ಪೂರೈಕೆ, ಕಚ್ಚಾ ವಸ್ತುಗಳ ಬೃಹತ ಪ್ರಮಾಣದ ಕೊಳ್ಳುವಿಕೆ, ಆಧುನಿಕ ತಂತ್ರಜ್ಞಾನ ಮತ್ತು ಉಪಕರಣಗಳ ಗಳಿಸುವಿಕೆ, ಸಂಸ್ಥೆಗಳಿಂದ ಆರ್ಥಿಕ ಬೆಂಬಲ ಮತ್ತು ಸಂಘಟಿತ ಸ್ವದೇಶಿ ಮತ್ತು ಅಂತರಾಷ್ಟ್ರೀಯ ಮಾರುಕಟ್ಟೆಗಳನ್ನು ತಲುಪುವುದರಿಂದ ಹಿಡಿದು ಆಧುನಿಕ ಉತ್ಪಾದನೆ ಮತ್ತು ವ್ಯಾಪಾರ ರೂಢಿಗಳ ಅಳವಡಿಕೆ ಮತ್ತು ಸೂಕ್ತ ಪರಿಸರ ಸಂರಕ್ಷಣಾ ಕ್ರಮಗಳವರೆಗೆ ತಮ್ಮ ವ್ಯಾಪಾರದ ಪ್ರತಿ ಪ್ರಮುಖ ಅಂಶದಲ್ಲಿ ಸಾಮೂಹಿಕ ದಕ್ಷತೆಯನ್ನು ಸಾಧಿಸುವತ್ತ ಗುರಿಹೊಂದಿರುವುದು. ಈ ಉಪಕ್ರಮದ ಮೂಲ ಉದ್ದೇಶವೆಂದರೆ ಎಸ್.ಎಮ್.ಇ. ಗಳಿಗೆ ಬೃಹತ್ ಸ್ಪರ್ಧಿಗಳೊಂದಿಗಿನ ಒಂದು ಸಮಮಟ್ಟದ ಅವಕಾಶವನ್ನು ಒದಗಿಸುವುದು ಮತ್ತು ಅದೇ ಸಮಯದಲ್ಲಿ ಪ್ರತ್ಯೇಕ ವ್ಯಾಪರಗಳ ಸಮಗ್ರತೆಯನ್ನು ಉಳಿಸಿಕೊಳ್ಳುವುದು.

(c) ಸಂಬಂಧಿತ ಅಥವಾ ಪೂರಕ ಶ್ರೇಣಿಯ ಉತ್ಪನ್ನಗಳನ್ನು ಉತ್ಪಾದಿಸುವ ಮತ್ತು ಮಾರಾಟ ಮಾಡುವ ಉದ್ಯಮಿಗಳ ಒಂದು ಗುಂಪು ಜೊತೆಗೂಡುವಂತೆ ಸಮೂಹಗಳನ್ನು ಸಂಘಟಿಸಲಾಗುವುದು / ಅಭಿವೃದ್ಧಿಪಡಿಸಲಾಗುವುದು. ಇದರಿಂದಾಗಿ ಅವರು ಜೊತೆಗೂಡಿ ಸಾಮಾನ್ಯ ಸವಾಲುಗಳು ಮತ್ತು ಅವಕಾಶಗಳನ್ನು ಎದುರಿಸುವ ಮತ್ತು ಸಾಮೂಹಿಕ ದಕ್ಷತೆಯನ್ನು ಸಾಧಿಸುವ ಉದ್ದೇಶದೊಂದಿಗೆ ಸೇರಿ ಅವರ ವೈಯಕ್ತಿಕ ಸಾಮರ್ಥ್ಯದ ಹೊರಗಿರುವ ಮಾರುಕಟ್ಟೆಗಳನ್ನು ಭೇದಿಸುವರು. ಅಂತೆಯೇ ಈ ಸಮೂಹಗಳನ್ನು ಭಾರತ ಸರ್ಕಾರದ ಜವಳಿ ಸಚಿವಾಲಯದ ಸಂಘಟಿತ ಜವಳಿ ಪಾರ್ಕ್‌ಗಳಿಗಾಗಿ ಮಾಡಿದ ಯೋಜನೆ (ಎಸ್.ಐ.ಟಿ.ಪಿ)ಗಾಗಿ ರಚಿಸಿರುವ ಸೂಚ್ಯಂಕಗಳ ಅನುಸಾರ ಅಭಿವೃದ್ಧಿಪಡಿಸಲಾಗುವುದು.

**(7) ಪ್ರಸಕ್ತ ಸಮೂಹಗಳು / ಬ್ರೌನ್ ಫೀಲ್ಡ್ ಸಮೂಹ ಅಭಿವೃದ್ಧಿಗೆ ಬೆಂಬಲ:**

(a) ಒಂದು ಸಮೂಹ ಆಧಾರಿತ ಅಭಿವೃದ್ಧಿ ತಂತ್ರವು ರಾಜ್ಯದಲ್ಲಿ, ಜವಳಿ ಘಟಕಗಳನ್ನು ಹೊಂದಿರುವ ಅಸ್ತಿತ್ವದಲ್ಲಿರುವ ಕೈಗಾರಿಕಾ ಎಸ್ಟೇಟ್‌ಗಳನ್ನು ಅಳವಡಿಸಿಕೊಳ್ಳಲು ಪ್ರಸ್ತಾಪಿಸಲಾಗುವುದು. ಈ ಘಟಕಗಳು ಮೌಲ್ಯ ಸರಣಿಯ ಉಪ ಕ್ಷೇತ್ರಗಳ ಅಥವಾ ಒಂದು ಸಂಯೋಜಿತ ಜವಳಿ ಘಟಕವನ್ನು ಹೊಂದಿರುವುದು.

(b) ಇದರ ಉದ್ದೇಶವು ಕ್ಷೇತ್ರದ ಸುಸ್ಥಿರ ಬೆಳವಣಿಗೆಯನ್ನು ಮುಂದುವರಿಸುವುದು, ವಿಸ್ತರಣೆ ಅಥವಾ ತಂತ್ರಜ್ಞಾನ ಉನ್ನತೀಕರಣದ ಮೂಲಕ ಅಂತಾರಾಷ್ಟ್ರೀಯವಾಗಿ ಸ್ಪರ್ಧಾತ್ಮಕವಾಗುವುದು.

(c) ಹಾಲಿ ಇರುವವಾಗಿ ಅಲಭ್ಯವಿರುವ ಸಾಮಾನ್ಯ ಸೌಕರ್ಯಗಳು ಮತ್ತು ಸಿಇಟಿಪಿ ಇತ್ಯಾದಿಯಂತಹ ಬಂಡವಾಳಕ್ಕಾಗಿ ರಾಜ್ಯ ಸರಕಾರವನ್ನು ಸಂಪರ್ಕಿಸಲು ಅಸ್ತಿತ್ವದಲ್ಲಿರುವ ಕೈಗಾರಿಕಾ ಎಸ್ಟೇಟ್‌ಗಳಲ್ಲಿ ಅಥವಾ ಹೊರಗಿನ ಜವಳಿ ಘಟಕಗಳೊಂದಿಗೆ ಸಂಘಟನೆಗಳನ್ನು ನಿರ್ಮಿಸಬಹುದು.

(d) ಕೈಗಾರಿಕಾ ಎಸ್ಟೇಟ್ ಮತ್ತು ಹತ್ತಿರದ ಘಟಕಗಳ ಮೃದು ಪೂರೈಕೆಗಳ (ಸಾಫ್ಟ್ ಇನ್‌ಪುಟ್ಸ್) ಅಭಿವೃದ್ಧಿಗಾಗಿ ರಾಜ್ಯ ಸರಕಾರವು ಧನಸಹಾಯ ಮಾಡುವುದು. ಕುಶಲ ಅಭಿವೃದ್ಧಿ, ಮಾರುಕಟ್ಟೆ/ಬ್ರ್ಯಾಂಡಿಂಗ್ ಮತ್ತು ಸಾಮರ್ಥ್ಯ ವರ್ಧಕದ ರೂಪದಲ್ಲಿ ಈ ಮೃದು ಪೂರೈಕೆಗಳ (ಸಾಫ್ಟ್ ಇನ್‌ಪುಟ್ಸ್) ನ್ನು ನೀಡಲಾಗುವುದು. ಈ ಸಹಯೋಗವು ಸಾಮಾನ್ಯ ಸೌಕರ್ಯಗಳ ಕಾರ್ಯಾಚರಣೆಗಳು ಮತ್ತು ನಿರ್ವಹಣಾ ಚಟುವಟಿಕೆಗಳನ್ನು ಒಯ್ಯುವುದು.

**(8) ಸಿದ್ಧ ಉಡುಪಿನ ಕ್ಷೇತ್ರ**

(a) ಸಿದ್ಧ ಉಡುಪಿನ ಕ್ಷೇತ್ರವು ಜವಳಿ ಮೌಲ್ಯ ಸರಣಿಯ ಕೊನೆಯ ಹಂತವಾಗಿದ್ದು, ಸಿದ್ಧ ಉಡುಪು ಕ್ಷೇತ್ರವು ಕಡಿಮೆ ಬಂಡವಾಳ ಮತ್ತು ಹೆಚ್ಚು ಉದ್ಯೋಗ ಕಲ್ಪಿಸುವ ಕ್ಷೇತ್ರವಾಗಿರುತ್ತದೆ. ಕಳೆದ ನೀತಿ ಅವಧಿಯಲ್ಲಿ ಸಿದ್ಧ ಉಡುಪು ಕ್ಷೇತ್ರದಲ್ಲಿ ಪ್ರತೀ ಒಂದು ಲಕ್ಷ ಹೂಡಿಕೆಯು ಸುಮಾರು 2–3 ಉದ್ಯೋಗಗಳನ್ನು ಸೃಷ್ಟಿಸಿರುವುದು. ಈ ಉದ್ಯಮವು ಮಹಿಳಾ ಸ್ನೇಹಿ ಉದ್ಯೋಗವಾಗಿದ್ದು ಹೆಚ್ಚಿನ ಸಂಖ್ಯೆಯ ಮಹಿಳೆಯರಿಗೆ ಉದ್ಯೋಗ ನೀಡುವುದು. ಅತ್ಯಾಧುನಿಕ ನೈಪುಣ್ಯದ ಅಗತ್ಯವಿಲ್ಲದಿರುವುದರಿಂದ ಈ ಕ್ಷೇತ್ರವು ಗ್ರಾಮೀಣ ನಿರುದ್ಯೋಗಿಗಳಿಗೆ ಉದ್ಯೋಗವನ್ನು ನೀಡುವುದು. ಕರ್ನಾಟಕ ವಿಶೇಷವಾಗಿ ಬೆಂಗಳೂರು ದೀರ್ಘ ಸಮಯದಿಂದ ಸಿದ್ಧ ಉಡುಪು ಉದ್ಯಮವನ್ನು ಹೊಂದಿರುವುದು. ಬೆಂಗಳೂರಿನ ಉಡುಪಿನ ಘಟಕಗಳು ಪ್ರಾಥಮಿಕವಾಗಿ, ನೂತನ ಶೈಲಿಯ ಉಡುಪನ್ನು ಆಧರಿಸಿ ವೊವೆನ್ ಉಡುಪನ್ನು ಉತ್ಪಾದಿಸುವುದು. ಸುಮಾರು 15,000 ಮಧ್ಯಮ ಮತ್ತು ಬೃಹತ್ ಘಟಕಗಳು ಬೆಂಗಳೂರಿನಲ್ಲಿರುತ್ತವೆ ಮತ್ತು ಬೆಂಗಳೂರು ಸುತ್ತುಮುತ್ತ ಹಾಗೂ ಬಳ್ಳಾರಿಯಲ್ಲಿ ಸಣ್ಣ ಘಟಕಗಳಿರುತ್ತವೆ.

(b) ಹೊಸ ಉದ್ಯೋಗಾವಕಾಶಗಳನ್ನು ಸೃಷ್ಟಿಸಲು ಈ ಕ್ಷೇತ್ರಕ್ಕೆ ಸಾಮರ್ಥ್ಯವಿರುವುದರಿಂದ, ಸಿದ್ಧ ಉಡುಪುಗಳ ಕ್ಷೇತ್ರದಲ್ಲಿ ಹೂಡಿಕೆಗಳನ್ನು ಆಕರ್ಷಿಸಲು ಮುಂಬರುವ ನೀತಿಯು ಮುಂದುವರೆಸುವುದು.

**(9) ತಾಂತ್ರಿಕ ಜವಳಿ**

(a) ಭಾರತದಲ್ಲಿ, ಮೌಲ್ಯಾಧರಿತ ವಸ್ತ್ರೋದ್ಯಮವು ತಾಂತ್ರಿಕ ಜವಳಿ ಎಂದು ಸಾಮಾನ್ಯವಾಗಿ ಉಲ್ಲೇಖಿಸುವ ಒಂದು ಕ್ಷೇತ್ರದಲ್ಲಿ ಒಟ್ಟಾಗಿ ವರ್ಗೀಕರಿಸಿರುವುದು. ಈ ಕ್ಷೇತ್ರವು ಫೈಬರನ್ನು ಕೈಗಾರಿಕಾ ಉತ್ಪನ್ನಗಳಾಗಿ ಪರಿವರ್ತಿಸುವುದು. ಭಾರತೀಯ ತಾಂತ್ರಿಕ ಜವಳಿ ಉದ್ಯಮವು ನೂತನ ಮತ್ತು ಹೆಚ್ಚು ಅಸಂಘಟಿತವಾಗಿರುವುದು.

(b) ಭಾರತ ಸರಕಾರ, ಜವಳಿ ಸಚಿವಾಲಯದ ಅನುಸಾರ 2011–12ನೇ ವರ್ಷದಲ್ಲಿ ಭಾರತದಲ್ಲಿ ತಾಂತ್ರಿಕ ಜವಳಿ ಮಾರುಕಟ್ಟೆಯ ಗಾತ್ರವು ರೂ.63,202 ಕೋಟಿ ಎಂದು ಅಂದಾಜಿಸಲಾಗಿದೆ. ಇದು ವರ್ಷಾನುವರ್ಷ ಶೇ. 11% ರ ವಾರ್ಷಿಕ ಬೆಳವಣಿಗೆಯೊಂದಿಗೆ 2007–08 ರಲ್ಲಿ ರೂ.41,756 ಕೋಟಿಯಿಂದ ಹೆಚ್ಚಳವಾಗಿರುವುದು. 12ನೇ ಪಂಚ ವಾರ್ಷಿಕ ಯೋಜನೆಗಾಗಿ ತಾಂತ್ರಿಕ ಜವಳಿಯ ಉಪ–ಗುಂಪಿನ ಅನುಸಾರ ತಾಂತ್ರಿಕ ಜವಳಿ ಕೈಗಾರಿಕಾ ಮಾರುಕಟ್ಟೆಯ ಗಾತ್ರವು 2016–17 ರಲ್ಲಿ ವರ್ಷಾನುವರ್ಷ ಶೇ 20% ರ ಬೆಳವಣಿಗೆ ದರದೊಂದಿಗೆ ರೂ.1,58,540 ಕೋಟಿ ತಲುಪುವುದು.

(c) ಕೃಷಿ, ನಿರ್ಮಾಣ, ರಕ್ಷಣೆ, ರಸ್ತೆಗಳು / ಹೆದ್ದಾರಿಗಳು, ಅಣೆಕಟ್ಟುಗಳು, ಆಸ್ಪತ್ರೆಗಳು, ಮೋಟಾರು ವಾಹನಗಳು, ಹಡಗು ನಿರ್ಮಾಣ, ವಿಮಾನಗಳು, ಏರೋಸ್ಪೇಸ್, ಪ್ಯಾಕೇಜಿಂಗ್, ಸಜ್ಜು / ಆಂತರಿಕ ಪೀಠೋಪಕರಣಗಳು, ಕ್ರೀಡಾ ಉಪಕರಣಗಳು, ಪರಿಸರ ರಕ್ಷಣೆ, ಫಲಕಗಳು ಇತ್ಯಾದಿಗಳಾದಂತಹ ಆರ್ಥಿಕ ಚಟುವಟಿಕೆಗಳ ಒಂದು ವಿಶಾಲ ವ್ಯಾಪ್ತಿಯಲ್ಲಿ ತಾಂತ್ರಿಕ ಜವಳಿ ಮತ್ತು ನಾನ್–ವೊವೆನ್ ಉತ್ಪನ್ನಗಳನ್ನು ಬಳಸುವುದು.

(d) ತಾಂತ್ರಿಕ ಜವಳಿಯು ಜವಳಿ ಮೌಲ್ಯ ಸರಣಿಯಲ್ಲಿ ಪ್ರಮುಖ ಉದಯೋನ್ಮುಖ ಕ್ಷೇತ್ರಗಳಲ್ಲಿ ಒಂದಾಗಿರುವುದರಿಂದ ಕರ್ನಾಟಕ ಸರಕಾರವು ತಾಂತ್ರಿಕ ಜವಳಿ ಕ್ಷೇತ್ರದ ಮೇಲೆ ವಿಶೇಷ ಒತ್ತು ನೀಡುವುದು. ಬೃಹತ್ ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಮಾರುಕಟ್ಟೆ ಇರುವ ತಾಂತ್ರಿಕ ಜವಳಿ ಮತ್ತು ನಾನ್‌ವೊವೆನ್‌ಗಳ ಉತ್ಪಾದನೆಗಾಗಿ ಜಾಗತಿಕ ಕೇಂದ್ರವಾಗಲು ಕರ್ನಾಟಕಕ್ಕೆ ಸಾಮರ್ಥ್ಯವಿರುವುದು.

**(10) ಜವಳಿ / ತಾಂತ್ರಿಕ ಜವಳಿ ಉತ್ಕೃಷ್ಟತೆಯ ಕೇಂದ್ರ**

(a) ಜ್ಞಾನ ಆಧಾರಿತ ಸಂಶೋಧನೆ ಸಂಬಂಧಿತ ಕೈಗಾರಿಕೆಯಾದಲ್ಲಿ ಜವಳಿ ಕ್ಷೇತ್ರ ಮತ್ತು ತಾಂತ್ರಿಕ ಜವಳಿಯಲ್ಲಿರುವ ಪ್ರವೃತ್ತಿಯ ಬದಲಾವಣೆಯಿಂದಾಗಿ ಜವಳಿಗಾಗಿ ಉತ್ಕೃಷ್ಟತೆ ಕೇಂದ್ರದ ಅಗತ್ಯವಿರುವುದು. ಜವಳಿ ಉತ್ಕೃಷ್ಟತೆಯ ಕೇಂದ್ರವನ್ನು ರಾಜ್ಯದಲ್ಲಿ ಕರ್ನಾಟಕ

ಸರ್ಕಾರದ ಪ್ರಮುಖ ಪಾಲುದಾರಿಕೆಯಲ್ಲಿ, ಬಾಂಬೆ ಟೆಕ್ಸ್‌ಟೈಲ್ಸ್ ರಿಸರ್ಚ್ ಅಸೋಸಿಯೇಶನ್ (ಬಿ.ಟಿ.ಆರ್.ಎ)ನಂಥ ಅವಶ್ಯಕ ಸಾಮರ್ಥ್ಯ ಹೊಂದಿರುವ ಇತರ ಸಂಸ್ಥೆಗಳು ಅಥವಾ ರಾಜ್ಯದ ಯಾವುದೇ ಪ್ರಖ್ಯಾತ ತಾಂತ್ರಿಕ ಸಂಸ್ಥೆಗಳ ಸಹಯೋಗದೊಂದಿಗೆ ಸ್ಥಾಪಿಸಲಾಗುವುದು, ಜವಳಿ ಉತ್ಕೃಷ್ಟತೆಯ ಕೇಂದ್ರದ ನಿಧಿ ಪೂರೈಕೆಯನ್ನು ರಾಜ್ಯ ಸರ್ಕಾರವು ಭರಿಸುವುದು.

(b) ಉತ್ಕೃಷ್ಟತೆಯ ಕೇಂದ್ರದಿಂದ ಕೈಗೊಳ್ಳಲಾಗುವ ವಿವಿಧ ಚಟುವಟಿಕೆಗಳು:

(i) ಸಂಶೋಧನೆ ಮತ್ತು ಅಭಿವೃದ್ಧಿ
(ii) ಮಾನವ ಸಂಪನ್ಮೂಲ ಅಭಿವೃದ್ಧಿ
(iii) ಜವಳಿ ಪರೀಕ್ಷೆ ಮತ್ತು ಮೌಲ್ಯಮಾಪನ
(iv) ತಾಂತ್ರಿಕ ಸೇವೆಗಳು ಮತ್ತು ಸಲಹೆ
(v) ಉಪಕರಣ (ಇನ್ಸ್ಟ್ರುಮೆಂಟೇಷನ್)
(vi) ಒದಗುವಿಕೆ ಕೇಂದ್ರ (ಇನ್‌ಕ್ಯುಬೇಷನ್ ಸೆಂಟರ್)
(vii) ಕೈಗಾರಿಕಾ ಪತ್ರಿಕೆಗಳ ಪ್ರಕಾಶನ

(c) ಈ ಕೇಂದ್ರವು ತಾಂತ್ರಿಕ ಜವಳಿ ಉತ್ಪನ್ನಗಳ ಅಭಿವೃದ್ಧಿಯಲ್ಲಿ ಉತ್ಪಾದಕರನ್ನು ಮತ್ತು ಅತ್ಯಂತ ವೈಜ್ಞಾನಿಕ ರೀತಿಯಲ್ಲಿ ತಾಂತ್ರಿಕ ಜವಳಿ ಉತ್ಪನ್ನಗಳನ್ನು ಅಳವಡಿಸುವಲ್ಲಿ ಬಳಕೆದಾರರಿಗೆ ಸಹಾಯಮಾಡುವುದು. ಆರ್&ಡಿ ಮತ್ತು ತರಬೇತಿಯ ಮೂಲಕ ಸಂಯುಕ್ತವಾಗಿ ಜ್ಞಾನ ವರ್ಧನೆಯು ಇದರ ಗುರಿಯಾಗಿದೆ. ತಾಂತ್ರಿಕ ಜವಳಿ ಫೈಬರ್‌ಗಳ ಅಭಿವೃದ್ಧಿ (ನೈಸರ್ಗಿಕ ಮತ್ತು ಕೃತಕ ಫೈಬರ್‌ಗಳು), ನೇಯ್ದ ಮತ್ತು ನಾನ್‌ವೊವನ್ ಉತ್ಪನ್ನಗಳ ಅಭಿವೃದ್ಧಿ, ತಾಂತ್ರಿಕವಾಗಿ ನವೀಕರಿಸಿದ ಉತ್ಪಾದನಾ ಪ್ರಕ್ರಿಯೆ, ವಿನ್ಯಾಸ ಮತ್ತು ಪರೀಕ್ಷಾ ಸೌಲಭ್ಯಗಳು, ಇತ್ಯಾದಿಗಳಿಗಾಗಿ ಆರ್ & ಡಿ ಯೋಜನೆಗಳನ್ನು ಕ್ಷೇತ್ರದಲ್ಲಿ ಕೈಗೊಳ್ಳಲಾಗುವುದು.

(d) ಉತ್ಕೃಷ್ಟತೆಯ ಕೇಂದ್ರವು ಜವಳಿ ಕ್ಷೇತ್ರದಲ್ಲಿ ವಿನ್ಯಾಸ ಅಭಿವೃದ್ಧಿ ಮತ್ತು ನೂತನ ಶೈಲಿ ಪ್ರವೃತ್ತಿಗಳನ್ನು ಮುನ್ಸೂಚಿಸಲು ಒಂದು ಪ್ರಧಾನ ಪಾತ್ರ ವಹಿಸುವುದು. ಇದು ಕಾರ್ಯಗಾರಗಳನ್ನು ಮತ್ತು ತರಬೇತಿ ಕಾರ್ಯಕ್ರಮಗಳನ್ನು ಸಂಘಟಿಸಲು ನೆರವು ನೀಡುವುದು ಮತ್ತು ಹೊಸ ಹೂಡಿಕೆದಾರರಿಗಾಗಿ ತಾಂತ್ರಿಕ ಪರಿಣತಿಯನ್ನು ಸಾಧಿಸಲು ಕೈಗಾರಿಕಾ ತಜ್ಞರಿಂದ ಸಮರ್ಥ ಮಾರ್ಗದರ್ಶನ ಬೆಂಬಲವನ್ನೂ ನೀಡುವುದು.

(e) ರಫ್ತುಗಳನ್ನು ಪ್ರೋತ್ಸಾಹಿಸುವ ಅಂತಾರಾಷ್ಟ್ರೀಯ ಮಾನದಂಡಗಳ ಅನುಸಾರ ಉತ್ಪಾದನಾ ಪ್ರಕ್ರಿಯೆ ಮತ್ತು ಪೂರ್ಣಗೊಂಡ ಸರಕಿಗೆ ಉತ್ತಮ ದೃಢೀಕರಣವೂ ಸ್ಥಾಪಿಸಲ್ಪಡುವುದು.

(f) ತಾಂತ್ರಿಕ ಜವಳಿ ಉತ್ಪನ್ನಗಳ ಹೊಸ ಉತ್ಪನ್ನ ಅಭಿವೃದ್ಧಿಯ ವೇಗವನ್ನು ವರ್ಧಿಸಲು, ಉತ್ಪಾದನೆ ಮತ್ತು ಮಾರಾಟ ಚಟುವಟಿಕೆಗಳನ್ನು ಸಾಗಿಸುವ ಸಲುವಾಗಿ ಒದಗುವಿಕೆ ಕೇಂದ್ರವನ್ನು ಸ್ಥಾಪಿಸಲಾಗುವುದು. ಹೊಸ ಹೂಡಿಕೆದಾರರು ವಾಣಿಜ್ಯ ಉತ್ಪಾದನೆಯ ಮೂಲರೂಪ (ಪ್ರೋಟೋಟೈಪ್) ತಯಾರಿಕೆಗೆ ಮತ್ತು ಉತ್ಪನ್ನ ಅಭಿವೃದ್ಧಿಗಾಗಿ ಒದಗುವಿಕೆ ಕೇಂದ್ರವನ್ನು ಸದುಪಯೋಗಿಸಿಕೊಳ್ಳಬಹುದು.

(g) ಒದಗುವಿಕೆಯ ಕೇಂದ್ರವು ಉತ್ತಮ ವ್ಯವಹಾರ ಯೋಚನೆಗಳನ್ನು ಹೊಂದಿರುವ, ಆದರೆ ವ್ಯಾಪಾರ ಪ್ರಸ್ತಾಪನೆಯನ್ನು ಬಳಸುವ ಹಿನ್ನಲೆ ಇಲ್ಲದ ಸಣ್ಣ ಆರಂಭಗಳಿಗೆ ವಿಭಿನ್ನ ವ್ಯಾಪಾರ ಪರಿಹಾರಗಳನ್ನು ಒದಗಿಸುವುದು. ಬೃಹತ್ ಉತ್ಪಾದನೆಯಲ್ಲಿ ತೊಡಗುವ ಮುನ್ನ ತಮ್ಮ ಯೋಚನೆಯಲ್ಲಿ ಕೆಲಸಮಾಡಲು ಕಚೇರಿ ಸೌಲಭ್ಯಗಳು, ಸಂಪನ್ಮೂಲಗಳು ಮತ್ತು ವ್ಯಾಪಾರ ಜಾಲ ಬೆಂಬಲದೊಂದಿಗೆ ಪೂರಕ ಉದ್ಯಮ ಸ್ಥಳವನ್ನು ನೀಡುವುದು.

(h) ಮಾದರಿ ಪ್ರದರ್ಶನಗಳು, ಜಾಗೃತಿ ಕಾರ್ಯಕ್ರಮಗಳು, ಇ–ಗ್ರಂಥಾಲಯ, ವೀಡಿಯೋ ಕಾನ್ಫರೆನ್ಸಿಂಗ್ ಮತ್ತು ಪುಸ್ತಕಗಳು ಮತ್ತು ವರದಿಗಳ ಪ್ರಕಟಣೆ ಉತ್ಪಾದಕರಿಗೆ ಮತ್ತು ತಾಂತ್ರಿಕ ಜವಳಿ ಉತ್ಪನ್ನಗಳ ಬಳಕೆದಾರರಿಗೆ ತಾಂತ್ರಿಕ ಪರಿಣತಿಯನ್ನು ನೀಡುವ ಮೂಲಕ ಸೆಂಟರ್ ಆಫ್ ಎಕ್ಸಲೆನ್ಸ್ ಮಾಹಿತಿಯ ಪ್ರಸಾರ ಮಾಡಲು ಒಂದು ಮಾಹಿತಿ ಕೇಂದ್ರವನ್ನು ಸ್ಥಾಪಿಸುವುದು.

**(11) ಈಕೋ ಜವಳಿ**

(a) ಹಾಲಿ ಇರುವ, ಗ್ರಾಹಕರಿಗೆ ಪರಿಸರದ ಚಟುವಟಿಕೆಗಳ ಕುರಿತು ಕಾಳಜಿ ಇರುವುದು. ಗ್ರಾಹಕರು ಪರಿಸರ ಸ್ನೇಹಿ ಸರಕುಗಳ ಬಗ್ಗೆ ಪ್ರಜ್ಞಾಪೂರ್ವಕರಾಗಿದ್ದು ನಿಸರ್ಗದಲ್ಲಿ ವಿಷಕಾರಿಯಲ್ಲದ ಉತ್ಪನ್ನಗಳಿಗೇ ಆದ್ಯತೆ ನೀಡುತ್ತಾರೆ. ಪರಿಸರ–ಸ್ನೇಹಿ ಉತ್ಪನ್ನಗಳೆಡೆಗಿನ ಈ ಒಲವನ್ನು ಜವಳಿ ಮತ್ತು ಸಿದ್ಧ ಉಡುಪುಗಳಿಗೆ, ವಿಶೇಷವಾಗಿ ಚರ್ಮದೊಂದಿಗೆ ನೇರ ಸಂಪರ್ಕ ಹೊಂದುವಂಥ ಉತ್ಪನ್ನಗಳಿಗೆ ವಿಸ್ತರಿಸಲಾಗಿದೆ.

(b) ವಿವಿಧ ಪರಿಸರ ವಿಪತ್ತನ್ನು ಕಡಿಮೆಗೊಳಿಸಲು ಜವಳಿ ಮತ್ತು ಉಡುಪು ತಯಾರಕರು ಅವರ ಉತ್ಪನ್ನಗಳ ಸರಬರಾಜು ಸರಣಿ ಮತ್ತು ಉತ್ಪಾದನಾ ಆವರ್ತನದ ಪ್ರತಿಯೊಂದು ಹಂತವನ್ನು ಪರಿಶೀಲಿಸುವುದು. ವರ್ಣಗಳು ಮತ್ತು ರಾಸಾಯನಿಕಗಳನ್ನು ಆಯ್ಕೆ ಮಾಡುವಾಗ, ಅವುಗಳಲ್ಲಿ ಫಾರ್ಮಾಲ್ಡಿಹೈಡ್ ಅಂಶ, ಕೀಟನಾಶಕ, ಭಾರದ ಲೋಹ ಇತ್ಯಾದಿಗಳ ಅಂಶ ಕಡಿಮೆ ಇದೆ ಎನ್ನುವತ್ತ ವಿಶೇಷ ಗಮನ ಹರಿಸುವುದು.

(c) ಜೈವಿಕ ಉತ್ಪಾದನೆ ಮತ್ತು ಪ್ರಕ್ರಿಯೆಯ ಜಾಗತಿಕ ಮಾನದಂಡಗಳನ್ನು ಪೂರೈಸಿದೆಯೇ ಎಂದು ಸರ್ಟಿಫಿಕೇಶನ್ ಪ್ರಕ್ರಿಯೆಯು ಖಚಿತಪಡಿಸುವುದು. ಇದು ಕಂಪನಿ ಮತ್ತು ಅದರ ಉತ್ಪನ್ನಗಳನ್ನು ದೃಢೀಕರಿಸುವುದು ಹಾಗೂ ಅಂತಾರಾಷ್ಟ್ರೀಯ ಮಾರುಕಟ್ಟೆಯಲ್ಲಿ ವಿಶ್ವಾಸಾರ್ಹತೆಯನ್ನು ಹೆಚ್ಚಿಸುವುದು.

(d) ಉತ್ಪನ್ನಗಳ ಈಕೋ– ಲೇಬಲಿಂಗ್ ಮತ್ತು ಪರಿಸರ–ಸ್ನೇಹೀ ತಯಾರಿಕೆಯ ಮೇಲೆ ನೀತಿಯು ಕೇಂದ್ರೀಕರಿಸುವುದು. ರಾಜ್ಯ ಸರಕಾರವು ಅಂತಾರಾಷ್ಟ್ರೀಯ ಮಾನದಂಡದ ಅನುಸಾರ ವಿಶೇಷಣಗಳನ್ನು ಅನುಸರಿಸುವ ಪರಿಸರ ಸ್ನೇಹೀ ವಸ್ತ್ರ ಮತ್ತು ಉಡುಪು ತಯಾರಿಕೆಯ ಯೋಜನೆಯನ್ನು ಪ್ರೋತ್ಸಾಹಿಸುವುದು.

(e) ನೀರು ಸರಬರಾಜು, ಜೀವವಿಜ್ಞಾನ ಮತ್ತು ರಾಸಾಯನಿಕ ಬಹಿರ್ಗಮಿಸುವ ಸಂಸ್ಕರಣಾ ಘಟಕಗಳು, ಪರ್ಯಾಯ ವಿದ್ಯುತ್ ಸರಬರಾಜು, ಹಬೆ ಮತ್ತು ಸಂಕುಚಿತ ವಾಯು ಎಂಬೀ ಮೂಲಭೂತ ಸೌಕರ್ಯಗಳು ಯೋಜನೆಯಲ್ಲಿ ಒಳಗೊಂಡಿರುವುದು. ವಿದ್ಯುತ್ ಶಕ್ತಿ ಉಳಿತಾಯ ಪ್ರಕ್ರಿಯೆಗಳನ್ನು ಒಳಗೊಳ್ಳಲು ಇವೆಲ್ಲವನ್ನು ವಿನ್ಯಾಸಗೊಳಿಸಿರುವುದು.

(f) ರಾಜ್ಯದಲ್ಲಿ ಈಕೋ ಜವಳಿಯನ್ನು ಪ್ರೋತ್ಸಾಹಿಸಲು, ಸರಕಾರವು ಜೈವಿಕ ಉತ್ಪಾದನೆ ಮತ್ತು ಪ್ರಕ್ರಿಯೆಯ ನಿಶ್ಚಿತ ಮಾನದಂಡಕ್ಕೆ ಅನುಸಾರವಾಗಿರುವ ಕಂಪನಿಗಳಿಗೆ ಹೆಚ್ಚಿನ ಧನಸಹಾಯ ನೀಡುವುದು.

**(12) ಹಿಂದುಳಿದ ಪ್ರದೇಶಗಳಲ್ಲಿ ನಿರ್ದಿಷ್ಟ ವಲಯಗಳು**

(a) ಹಿಂದುಳಿದ ಪ್ರದೇಶಗಳಲ್ಲಿ ನಿರ್ದಿಷ್ಟ ಜವಳಿ ವಲಯಗಳ ಅಭಿವೃದ್ಧಿಗಾಗಿ ರಾಜ್ಯ ಸರಕಾರವು ರಾಜ್ಯದಲ್ಲಿ ಸ್ಥಳಗಳನ್ನು ಗುರುತಿಸುವುದು. ನಿಯೋಜಿತ ಸ್ಥಳಗಳಲ್ಲಿ ಉತ್ತಮ ಆರ್ಥಿಕ ಚಟುವಟಿಕೆಗಳನ್ನು ಹೊಂದಲು ಜವಳಿ ಕ್ಷೇತ್ರದಲ್ಲಿ ಪ್ರಸಕ್ತ ಪರಿಸರ ಅಭಿವೃದ್ಧಿಯ ಕಡೆಗೆ ಇದು ಗುರಿಯಿಡುವುದು.

(b) ಹಿಂದುಳಿದ ಪ್ರದೇಶಗಳಲ್ಲಿ ನಿರ್ದಿಷ್ಟ ಜವಳಿ ವಲಯಗಳ ರೂಪದಲ್ಲಿ ಜವಳಿ ಕ್ಷೇತ್ರದಲ್ಲಿ ಬೃಹತ್ ಹೂಡಿಕೆಗಳನ್ನು ತರಲು, ಅಂತಹ ವಲಯಗಳಲ್ಲಿ ಪಾರ್ಕುಗಳ ಹಾಗೂ ಘಟಕಗಳ ಅಭಿವೃದ್ಧಿಗಾಗಿ ವಿಶಿಷ್ಟ ಪ್ರೇರಣೆಯನ್ನು ನೀಡಲಾಗುವುದು.

(c) ಕ್ಷೇತ್ರದಲ್ಲಿ ನಾವೀನ್ಯ ಮತ್ತು ತಂತ್ರಜ್ಞಾನ ಅಭಿವೃದ್ಧಿಯನ್ನು ಮತ್ತಷ್ಟು ಪ್ರೋತ್ಸಾಹಿಸುವ ಸಂಶೋಧನಾ ಕೇಂದ್ರಗಳಂತಹ ಸಾಮಾನ್ಯ ಸೌಲಭ್ಯಗಳನ್ನು ಈ ವಲಯವು ಹೊಂದಿರುವುದು. ಇದು ಸಂಪೂರ್ಣವಾಗಿ ರಾಜ್ಯ ಮತ್ತು ಕ್ಷೇತ್ರದ ಮೌಲ್ಯವನ್ನು ವರ್ಧಿಸುವುದು

**(13) ನೀತಿಯ ಗುರಿಗಳು**

(a) ನೀತಿಯ ಸಂದರ್ಭದಲ್ಲಿ ಬಂಡವಾಳಗಳು ಮತ್ತು ಉದ್ಯೋಗದ ಕಡೆಗಿನ ಗುರಿಗಳು:

| ವರ್ಷ | 2013–14 | 2014–15 | 2015–16 | 2016–17 | 2017–18 | ಮೊತ್ತ |
|---|---|---|---|---|---|---|
| **ಬಂಡವಾಳ** (ರೂ. ಕೋಟಿಗಳಲ್ಲಿ) | 1002 | 1552 | 2462 | 2497 | 2487 | **10000** |
| **ಉದ್ಯೋಗ** | 50450 | 76100 | 124300 | 124575 | 124575 | **500000** |

(b) ಕ್ಷೇತ್ರದ ಸಂಕ್ಷೇಪ

(ಬಂಡವಾಳ ರೂ. ಕೋಟಿಗಳಲ್ಲಿ)

| ಕ್ಷೇತ್ರ/ವರ್ಷ | 2013–14 | | 2014–15 | | 2015–16 | | 2016–17 | | 2017–18 | | ಮೊತ್ತ | |
|---|---|---|---|---|---|---|---|---|---|---|---|---|
| | ಬಂಡವಾಳ | ಉದ್ಯೋಗ | ಬಂಡವಾಳ | ಉದ್ಯೋಗ | ಬಂಡವಾಳ | ಉದ್ಯೋಗ | ಬಂಡವಾಳ | ಉದ್ಯೋಗ | ಬಂಡವಾಳ | ಉದ್ಯೋಗ | ಬಂಡವಾಳ | ಉದ್ಯೋಗ |
| ಕೈಮಗ್ಗ | 2 | 1000 | 2 | 1000 | 2 | 1000 | 2 | 1000 | 2 | 1000 | 10 | 5000 |
| ವಿದ್ಯುತ್‌ಮಗ್ಗ | 50 | 5000 | 75 | 7500 | 125 | 12500 | 125 | 12500 | 125 | 12500 | 500 | 50000 |
| ನೂಲುವುದು | 200 | 2600 | 375 | 5000 | 475 | 6500 | 475 | 6500 | 475 | 6500 | 2000 | 27100 |
| ಪ್ರಕ್ರಿಯೆ | 50 | 350 | 100 | 900 | 210 | 1500 | 220 | 1575 | 210 | 1575 | 790 | 5900 |
| ಉಡುಪುಗಳು | 500 | 40000 | 750 | 60000 | 1250 | 100000 | 1250 | 100000 | 1250 | 100000 | 5000 | 400000 |
| ಟೆಕ್ನಿಕಲ್ ಟೆಕ್ಸ್ | 200 | 1500 | 250 | 1700 | 400 | 2800 | 425 | 3000 | 425 | 3000 | 1700 | 12000 |
| **ಮೊತ್ತ** | **1002** | **50450** | **1552** | **76100** | **2462** | **124300** | **2497** | **124575** | **2487** | **124575** | **10000** | **500000** |

**(14) ಜವಳಿ ಮತ್ತು ಉಡುಪಿನ ಘಟಕಗಳ ಭೌಗೋಳಿಕ ಚದರುವಿಕೆ**

(a) ಪ್ರಾದೇಶಿಕ ಅಸಮತೋಲನ ಮತ್ತು ಉದ್ಯೋಗವನ್ನು ರಾಜ್ಯದ ಹಿಂದುಳಿದ ಪ್ರದೇಶಗಳ ಬೆಳವಣಿಗೆಗಾಗಿ ಮತ್ತು ಉತ್ತೇಜಿಸುವ ಸಲುವಾಗಿ, ನೀತಿಯು ಗುರುತಿಸಲ್ಪಟ್ಟ ಪ್ರದೇಶಗಳಲ್ಲಿ ಜವಳಿ ಮತ್ತು ಉಡುಪಿನ ಘಟಕಗಳ ಬೌಗೋಳಿಕ ಚದರುವಿಕೆಯ ಮೇಲೆ ಕೇಂದ್ರೀಕರಿಸುವುದು.

(b) ರಾಜ್ಯವನ್ನು ಕೆಳಗಿನಂತೆ ಮೂರು ವಲಯಗಳಾಗಿ ವರ್ಗೀಕರಿಸುವುದು:

(i) **ವಲಯ 1**: ಜವಳಿ ಚಟುವಟಿಕೆಗಳಿಗಾಗಿ ಸಾಮರ್ಥ್ಯವಿರುವ ಹಿಂದುಳಿದ ಜಿಲ್ಲೆಗಳು ಗರಿಷ್ಟ ಅನುಕೂಲಗಳನ್ನು ಪಡೆಯುವುವು.

(ii) **ವಲಯ 2**: ತುಲನಾತ್ಮಕವಾಗಿ ಜವಳಿ ಸರಣಿಯ ದೃಷ್ಟಿಕೋನದಿಂದ ಅಭಿವೃದ್ಧಿಗೊಂಡ ಪ್ರದೇಶಗಳು ಮತ್ತು ಅತೀ ಕಡಿಮೆ ಅಥವಾ ಜವಳಿ ಚಟುವಟಿಕೆಗಳಿಲ್ಲದ ಜಿಲ್ಲೆಗಳು ಮತ್ತು ಬೆಂಗಳೂರು ನಗರ ಜಿಲ್ಲೆಯ ಆನೇಕಲ್ ತಾಲೂಕು ವಲಯ 2 ರಲ್ಲಿ ವರ್ಗೀಕರಿಸಲಾಗುವುದು, ಇವು ಕಡಿಮೆ ಅನುಕೂಲಗಳನ್ನು ಪಡೆಯುವುವು.

**ಟಿಪ್ಪಣಿ:**

(aa) ಪ್ರೋತ್ಸಾಹ ಮತ್ತು ರಿಯಾಯಿತಿ ವಿಸ್ತರಣೆ ಉದ್ದೇಶಗಳಿಗಾಗಿ ವಲಯ 1 ರಲ್ಲಿನ ಜಿಲ್ಲೆಯ ಬೃಹತ್‌ನಗರ ಪಾಲಿಕೆ ಮತ್ತು ನಗರಸಭೆ ಮಿತಿಗಳಲ್ಲಿರುವ ಎಲ್ಲಾ ಘಟಕಗಳನ್ನು ವಲಯ 2 ರಲ್ಲಿರುವಂತೆ ವರ್ಗೀಕರಿಸುವುದು.

(bb) ವಲಯ 2 ರ ಜಿಲ್ಲೆಯ ಬೃಹತ್‌ನಗರ ಪಾಲಿಕೆ ಮತ್ತು ನಗರಸಭೆ ಮಿತಿಗಳಲ್ಲಿರುವ ಎಲ್ಲಾ ಘಟಕಗಳು ವಲಯ 2 ರಲ್ಲಿಯೇ ಪ್ರೋತ್ಸಾಹ ಮತ್ತು ರಿಯಾಯಿತಿಗಳ ಅರ್ಹತೆಗೆ ಮುಂದುವರೆಯುವುದು.

(iii) **ವಲಯ 3**: ಆನೇಕಲ್ ತಾಲೂಕನ್ನು ಹೊರತು ಪಡಿಸಿ ಬೆಂಗಳೂರು ನಗರ ಜಿಲ್ಲೆಯಲ್ಲಿ ಇರುವ ಪ್ರದೇಶಗಳಿಗೆ ನೀತಿಯಡಿ ಯಾವುದೇ ಧನಸಹಾಯವನ್ನು ಒದಗಿಸಲಾಗುವುದಿಲ್ಲ.

(c) ಆದಾಗ್ಯೂ, ಎಸ್‌ಪಿವಿ ಗಳಿಗೆ / ಯೋಜನಾ ಪ್ರಸ್ತಾಪಿತರಿಗೆ ಪ್ರಸ್ತಾಪಿಸಿದ ನೆರವುಗಳು ಯಾವ ವಲಯಗಳಲ್ಲಿ ಕಾರ್ಯಗತಗೊಳಿಸಿರುವುದೆಂದು ಗಣನೆಗೆ ತೆಗೆದುಕೊಳ್ಳದೆ ಈ ಕೆಳಗಿನ ನೆರವುಗಳನ್ನು ಒದಗಿಸಲಾಗುವುದು;

(i) ಬ್ರೌನ್ ಫೀಲ್ಡ್ ಸಮೂಹ ಅಭಿವೃದ್ಧಿ

(ii) ಸಾಮಾನ್ಯ ಎಫ್ಲ್ಯೂಯೆಂಟ್ ಟ್ರೀಟ್ಮೆಂಟ್ ಪ್ಲ್ಯಾಂಟ್ & ಅಪಾಯಕಾರಿ ತ್ಯಾಜ್ಯ ವಿಲೇವಾರಿ ಸೌಕರ್ಯ

(iii) ಸಾಮರ್ಥ್ಯ ವರ್ಧಕ ಬೆಂಬಲ

(iv) ಮಾನವ ಸಂಪನ್ಮೂಲ & ಪರಿಸರ ಅಂಗೀಕಾರಕ್ಕಾಗಿ ಸಹಾಯ

**(d)** ರಾಜ್ಯದಲ್ಲಿ ಸಾಮರ್ಥ್ಯವುಳ್ಳ ಜವಳಿ ವಲಯಗಳೊಂದಿಗೆ ಅದೇ ತಾರ್ಕಿಕ ವಿವರಣೆಯೊಂದಿಗೆ ವಲಯಗಳ ವಿಂಗಡಣೆಯನ್ನು **ಅನುಬಂಧ 4** & **ಅನುಬಂಧ 5** ರಲ್ಲಿ ತೋರಿಸಿರುವುದು.

**(15) ನೀಡಲಾಗುವ ಪ್ರೋತ್ಸಾಹನಗಳು**

ರಾಜ್ಯದಲ್ಲಿ ಜವಳಿ ಕ್ಷೇತ್ರದ ಅಭಿವೃದ್ಧಿಯ ಸಲುವಾಗಿ, ಮುಂಬರುವ ಜವಳಿ ನೀತಿ 2013–2018 ಯು ಪ್ರೋತ್ಸಾಹಕ ಧನವನ್ನು ನೀಡಿ ಜವಳಿ ಕ್ಷೇತ್ರದ ವಿವಿಧ ಮೌಲ್ಯ ಸರಣಿಯಲ್ಲಿ ಬಂಡವಾಳ ಹೂಡಲು ಉದ್ಯಮಗಳಿಗೆ ಬೆಂಬಲವನ್ನು ನೀಡುವುದು. ಪ್ರೋತ್ಸಾಹ ಧನದ ಯೋಜನೆ, ಅದರ ಉದ್ದೇಶ, ಅರ್ಹತೆ ಮತ್ತು ಸಹಾಯ ಒದಗಿಸುವ ವಿವಿಧ ಸೌಲಭ್ಯಗಳು ಮತ್ತು ಹಣಕಾಸು ಮಾದರಿಗಳನ್ನು ಇಲ್ಲಿ ವಿವರಿಸಲಾಗಿದೆ:

<table>
<tr><th>ಕ್ರ ಸಂ.</th><th>ಪ್ರೋತ್ಸಾಹಕ ಧನ</th><th>ವಲಯ 1</th><th>ವಲಯ 2</th></tr>
<tr><td>1</td><td>(a) ಸಾಲ ಸಂಪರ್ಕ ಬಂಡವಾಳ ಸಹಾಯಧನ<br><br>(i) ಸಾಮಾನ್ಯ ವಿಭಾಗ<br><br>(ii) ಹೆಚ್ಚುವರಿ ಸಹಾಯಧನ<br>(aa) ನಿಯೋಜಿತ ಜವಳಿ ಪಾರ್ಕುಗಳ ಘಟಕಗಳು</td>
<td><table>
<tr><th>ಬಂಡವಾಳ ಆವರಣ</th><th>ಪ್ರೋತ್ಸಾಹ ಧನದ ಪ್ರಮಾಣ</th></tr>
<tr><td>ಎಮ್‌ಎಸ್‌ಎಮ್‌ಇ ಯೋಜನೆಗಳು (ರೂ. 10 ಕೋಟಿ ತನಕ)</td><td>ಸ್ಥಿರ ಆಸ್ತಿಗಳ 20%</td></tr>
<tr><td>ರೂ. 10 ಕೋಟಿ ಯಿಂದ ರೂ. 25 ಕೋಟಿಗಳು</td><td>ಸ್ಥಿರ ಆಸ್ತಿಗಳ 20% ಅಥವಾ ರೂ.3 ಕೋಟಿ, ಯಾವುದು ಕಡಿಮೆಯೋ ಅದು</td></tr>
<tr><td>ರೂ. 26 ಕೋಟಿ ಯಿಂದ ರೂ 50 ಕೋಟಿಗಳು</td><td>ಸ್ಥಿರ ಆಸ್ತಿಗಳ 20% ಅಥವಾ ರೂ.4 ಕೋಟಿ, ಯಾವುದು ಕಡಿಮೆಯೋ ಅದು</td></tr>
<tr><td>ರೂ. 51 ಕೋಟಿ ಯಿಂದ ರೂ 99 ಕೋಟಿಗಳು</td><td>ಸ್ಥಿರ ಆಸ್ತಿಗಳ 20% ಅಥವಾ ರೂ.6 ಕೋಟಿ, ಯಾವುದು ಕಡಿಮೆಯೋ ಅದು</td></tr>
</table>
ಸ್ಥಿರಾಸ್ತಿಗಳ ಮೇಲೆ 5% ಅಥವಾ ರೂ. 10 ಲಕ್ಷ, ಯಾವುದು ಕಡಿಮೆಯೋ ಅದು<br>
ಸ್ಥಿರಾಸ್ತಿಗಳ ಮೇಲೆ 20% ಅಥವಾ ರೂ. 20 ಲಕ್ಷ, ಯಾವುದು ಕಡಿಮೆಯೋ ಅದು<br>
ಸ್ಥಿರಾಸ್ತಿಗಳ ಮೇಲೆ 5% ಅಥವಾ ರೂ. 5 ಲಕ್ಷ, ಯಾವುದು ಕಡಿಮೆಯೋ ಅದು<br>
ಸ್ಥಾವರ ಮತ್ತು ಯಂತ್ರೋಪಕರಣಗಳ ಮೌಲ್ಯದ ಮೇಲೆ ಹೆಚ್ಚುವರಿ 10% ಅಥವಾ ರೂ. 25 ಲಕ್ಷ, ಯಾವುದು ಕಡಿಮೆಯೋ ಅದು.</td>
<td><table>
<tr><th>ಬಂಡವಾಳ ಆವರಣ</th><th>ಪ್ರೋತ್ಸಾಹ ಧನದ ಪ್ರಮಾಣ</th></tr>
<tr><td>ಎಮ್‌ಎಸ್‌ಎಮ್‌ಇ ಯೋಜನೆಗಳು (ರೂ. 10 ಕೋಟಿ ತನಕ)</td><td>ಸ್ಥಿರ ಆಸ್ತಿಗಳ 15%</td></tr>
<tr><td>ರೂ. 10 ಕೋಟಿ ಯಿಂದ ರೂ. 25 ಕೋಟಿಗಳು</td><td>ಸ್ಥಿರ ಆಸ್ತಿಗಳ 15% ಅಥವಾ ರೂ.2 ಕೋಟಿ, ಯಾವುದು ಕಡಿಮೆಯೋ ಅದು</td></tr>
<tr><td>ರೂ. 26 ಕೋಟಿ ಯಿಂದ ರೂ 50 ಕೋಟಿಗಳು</td><td>ಸ್ಥಿರ ಆಸ್ತಿಗಳ 15% ಅಥವಾ ರೂ.3 ಕೋಟಿ, ಯಾವುದು ಕಡಿಮೆಯೋ ಅದು</td></tr>
<tr><td>ರೂ. 51 ಕೋಟಿ ಯಿಂದ ರೂ 99 ಕೋಟಿಗಳು</td><td>ಸ್ಥಿರ ಆಸ್ತಿಗಳ 15% ಅಥವಾ ರೂ.5 ಕೋಟಿ, ಯಾವುದು ಕಡಿಮೆಯೋ ಅದು</td></tr>
</table>
ಸ್ಥಿರಾಸ್ತಿಗಳ ಮೇಲೆ 5% ಅಥವಾ ರೂ. 10 ಲಕ್ಷ, ಯಾವುದು ಕಡಿಮೆಯೋ ಅದು<br>
ಸ್ಥಿರಾಸ್ತಿಗಳ ಮೇಲೆ 20% ಅಥವಾ ರೂ. 20 ಲಕ್ಷ, ಯಾವುದು ಕಡಿಮೆಯೋ ಅದು<br>
ಸ್ಥಿರಾಸ್ತಿಗಳ ಮೇಲೆ 5% ಅಥವಾ ರೂ. 5 ಲಕ್ಷ, ಯಾವುದು ಕಡಿಮೆಯೋ ಅದು</td></tr>
</table>

| ಕ್ರ ಸಂ. | ಪ್ರೋತ್ಸಾಹಕ ಧನ | ವಲಯ 1 | ವಲಯ 2 |
|---|---|---|---|
| | (dd) ಎಸ್‌ಸಿ/ಎಸ್‌ಟಿ ವರ್ಗ<br>(cc) ದೌರ್ಬಲ್ಯವರುವ ವ್ಯಕ್ತಿಗಳು / ಅಲ್ಪಸಂಖ್ಯಾತರು / ಮಾಜಿ ಸೈನಿಕರು / ಮಹಿಳೆಯರು<br>**(b) ವಿಶೇಷ ಸಾಲ ಸಂಪರ್ಕ ಬಂಡವಾಳ ಸಹಾಯಧನ**<br>(i) ತಾಂತ್ರಿ ಜವಳಿ ಘಟಕಗಳು<br>(ii) ಏಕೀಕೃತ ಘಟಕಗಳು<br>(ಜವಳಿ ಒಂದು ಮೌಲ್ಯ ಸರಣಿ ಚಟುವಟಿಕೆಗಿಂತ ಅಧಿಕವಿರುವ ಘಟಕಗಳು)<br>(iii) ಪರಿಸರ ಸ್ನೇಹೀ ಘಟಕಗಳು | ಸ್ಥಾವರ ಮತ್ತು ಯಂತ್ರೋಪಕರಣದ ಅರ್ಹತೆಯ ಮೇಲೆ ಹೆಚ್ಚುವರಿ 20% ಅಥವಾ ರೂ.30ಲಕ್ಷ, ಯಾವುದು ಕಡಿಮೆಯೋ ಅದು<br>ಸ್ವಚ್ಛತೆ ಮತ್ತು ಪರಿಸರ ಸ್ನೇಹೀ ತಂತ್ರಜ್ಞಾನವನ್ನು ಪ್ರೋತ್ಸಾಹಿಸಲು ಅಳವಡಿಸಲಾದ ಸ್ಥಾವರ ಮತ್ತು ಯಂತ್ರೋಪಕರಣಗಳ ಮೌಲ್ಯದ ಮೇಲೆ ಹೆಚ್ಚುವರಿ 20% ಅಥವಾ ರೂ.20ಲಕ್ಷ, ಯಾವುದು ಕಡಿಮೆಯೋ ಅದು. | ಸ್ಥಾವರ ಮತ್ತು ಯಂತ್ರೋಪಕರಣಗಳ ಮೌಲ್ಯದ ಮೇಲೆ ಹೆಚ್ಚುವರಿ 10% ಅಥವಾ ರೂ. 25 ಲಕ್ಷ, ಯಾವುದು ಕಡಿಮೆಯೋ ಅದು.<br>ಸ್ಥಾವರ ಮತ್ತು ಯಂತ್ರೋಪಕರಣದ ಅರ್ಹತೆಯ ಮೇಲೆ ಹೆಚ್ಚುವರಿ 10% ಅಥವಾ ರೂ.20ಲಕ್ಷ, ಯಾವುದು ಕಡಿಮೆಯೋ ಅದು<br>ಸ್ವಚ್ಛತೆ ಮತ್ತು ಪರಿಸರ ಸ್ನೇಹೀ ತಂತ್ರಜ್ಞಾನವನ್ನು ಪ್ರೋತ್ಸಾಹಿಸಲು ಅಳವಡಿಸಲಾದ ಸ್ಥಾವರ ಮತ್ತು ಯಂತ್ರೋಪಕರಣಗಳ ಮೌಲ್ಯದ ಮೇಲೆ ಹೆಚ್ಚುವರಿ 20% ಅಥವಾ ರೂ.20ಲಕ್ಷ, ಯಾವುದು ಕಡಿಮೆಯೋ ಅದು. |
| 2 | **ಬಡ್ಡಿ ಸಹಾಯಧನ** | ಉದ್ಯಮಿಗಳಿಗೆ ಸಹಾಯ ಮಾಡುವ ಸಲುವಾಗಿ, ಬಡ್ಡಿ ಸಹಾಯಧನವನ್ನು 99 ಕೋಟಿಗಳ ತನಕ ಹೂಡಿಕೆಗಳನ್ನು ಮಾಡುವ ಉದ್ಯಮಿಗಳಿಗೆ ನೀಡಲಾಗುವುದು.<br>ಅನ್ವಯಿಸುವ ಸಾಲ ಸಂಪರ್ಕ ಬಂಡವಾಳ ಸಹಾಯಧನ (ಸಾಮಾನ್ಯ ವರ್ಗ) ಮೊತ್ತವನ್ನು ಪ್ರೋತ್ಸಾಹ ನೀಡಿದ ವಿಭಾಗ (1) ರಲ್ಲಿನ ಮೊತ್ತದಲ್ಲಿ ಈ ಕೆಳಗಿನಂತೆ ವಿಭಜಿಸಲಾಗುವುದು:<br>(a) ಅವಶ್ಯ ಅಭಿವೃದ್ಧಿ ಮೈಲುಗಲ್ಲನ್ನು ಪೂರೈಸುವ ಮೇರೆಗೆ ಅನುಮೋದಿತ ಮೊತ್ತದ 50%.<br>(b) ಬ್ಯಾಂಕುಗಳು / ಹಣಕಾಸು ಸಂಸ್ಥೆಗಳ ಅವಶ್ಯ ಹಣಕಾಸು ಮೈಲುಗಲ್ಲುಗಳನ್ನು ಪೂರೈಸುವ ಮೇರೆಗೆ ಅನುಮೋದಿತ ಮೊತ್ತದ 50% ಐದು ವರ್ಷದ ಬಡ್ಡಿ ಸಹಾಯಧನ.<br>ಒದಗಿಸಿದ ಬಡ್ಡಿ ಸಹಾಯಧನವು ಪ್ರೋತ್ಸಾಹ ನೀಡುವ ವಿಭಾಗ (1)ರಲ್ಲಿನ ಮೊತ್ತದಲ್ಲಿ ಉಲ್ಲೇಖಿಸಿರುವಂತೆ ಯಾವುದೇ ಸಂದರ್ಭದಲ್ಲಿ ಮಿತಿಯನ್ನು ಮೀರುವುದಿಲ್ಲ. | |
| 3 | **ಪ್ರವೇಶ ತೆರಿಗೆ** | ಸ್ವಂತ ವಿದ್ಯುತ್ ಉತ್ಪಾದನೆ ಮತ್ತು ಸಾಮಾನ್ಯ ಎಫ್ಲ್ಯುಯೆಂಟ್ ಟ್ರೀಟ್ಮೆಂಟ್ ಮತ್ತು ತ್ಯಾಜ್ಯ ವಿಲೇವಾರಿ ಸೌಕರ್ಯಗಳಿಗಾಗಿ ಸ್ಥಾವರ & ಯಂತ್ರ ಮತ್ತು ಉಪಕರಣಗಳನ್ನೊಳಗೊಂಡ ಬಂಡವಾಳ ಸರಕಿನ ಮೇಲೆ ಪೂರ್ಣ ಮರುಪಾವತಿ. | |
| 4 | **ಮುದ್ರಾಂಕ ಸುಂಕ ಮರುಪಾವತಿ** | ಪೂರ್ಣ ಮರುಪಾವತಿ ಅನುಗುಣವಾಗಿ:<br>(i) ಕೈಗಾರಿಕಾ ಜಮೀನು / ಮಂಜೂರಾದ ನಿವೇಶನಗಳ ಗುತ್ತಿಗೆ, ಗುತ್ತಿಗೆ ಹಾಗೂ ಮಾರಾಟ ಮತ್ತು ಮಾರಾಟ ಪತ್ರಗಳ ಸಂಬಂಧವಾಗಿ.<br>(ii) ಗುತ್ತಿಗೆಯ ಮೇಲೆ ಪಡೆದ ಕೈಗಾರಿಕಾ ಕಟ್ಟಡ / ನಿವೇಶನಗಳ ಸಂಬಂಧವಾಗಿ.<br>(iii) ಬ್ಯಾಂಕುಗಳು / ಆರ್ಥಿಕ ಸಂಸ್ಥೆಗಳು ಮತ್ತು ಕರ್ನಾಟಕ ಸರ್ಕಾರ / ಭಾರತ ಸರ್ಕಾರದ ಇತರ ಸಂಸ್ಥೆಗಳಿಂದ ದೀರ್ಘಾವಧಿ ನಿಧಿಗಳನ್ನು ಪಡೆಯುವ ಉದ್ದೇಶದಿಂದ ಕೈಗೊಳ್ಳಲಾದ ಒತ್ತೆ ಒಪ್ಪಂದ, ಗಿರವಿ ಒಪ್ಪಂದ ಇತ್ಯಾದಿಯಂಥ ಭದ್ರತಾ ದಾಖಲೆಗಳನ್ನು ಒಳಗೊಂಡ ಸಾಲ ಮತ್ತು ಕಡ ಒಪ್ಪಂದಗಳ ಸಂಬಂಧವಾಗಿ. | 50% ಮರುಪಾವತಿ ಅನುಗುಣವಾಗಿ:<br>(i) ಕೈಗಾರಿಕಾ ಜಮೀನು / ಮಂಜೂರಾದ ನಿವೇಶನಗಳ ಗುತ್ತಿಗೆ, ಗುತ್ತಿಗೆ ಹಾಗೂ ಮಾರಾಟ ಮತ್ತು ಮಾರಾಟ ಪತ್ರಗಳ ಸಂಬಂಧವಾಗಿ.<br>(ii) ಗುತ್ತಿಗೆಯ ಮೇಲೆ ಪಡೆದ ಕೈಗಾರಿಕಾ ಕಟ್ಟಡ / ನಿವೇಶನಗಳ ಸಂಬಂಧವಾಗಿ.<br>(iii) ಬ್ಯಾಂಕುಗಳು/ ಆರ್ಥಿಕ ಸಂಸ್ಥೆಗಳು ಮತ್ತು ಕರ್ನಾಟಕ ಸರ್ಕಾರ/ ಭಾರತ ಸರ್ಕಾರದ ಇತರ ಸಂಸ್ಥೆಗಳಿಂದ ದೀರ್ಘಾವಧಿ ನಿಧಿಗಳನ್ನು ಪಡೆಯುವ ಉದ್ದೇಶದಿಂದ ಕೈಗೊಳ್ಳಲಾದ ಒತ್ತೆ ಒಪ್ಪಂದ, ಗಿರವಿ ಒಪ್ಪಂದ ಇತ್ಯಾದಿಯಂಥ ಭದ್ರತಾ ದಾಖಲೆಗಳನ್ನು ಒಳಗೊಂಡ ಸಾಲ ಮತ್ತು ಕಡ ಒಪ್ಪಂದಗಳ ಸಂಬಂಧವಾಗಿ. |
| 5 | **ಗ್ರೀನ್‌ಫೀಲ್ಡ್ ಜವಳಿ ಪಾರ್ಕುಗಳಿಗಾಗಿ ಸಾಮಾನ್ಯ ಮೂಲಭೂತ ಸೌಕರ್ಯ**<br>**(i) ಯಾವುದೇ ಕೇಂದ್ರ ಸರಕಾರ ಯೋಜನೆಗಳಡಿ ಅನುಮೋದಿತ ಯೋಜನೆಗಳು** | ಯೋಜನಾ ವೆಚ್ಚದ 40% ಅಥವಾ ರೂ.20 ಕೋಟಿಗಳು, ಯಾವುದು ಕಡಿಮೆಯೋ ಅದು<br>ಯೋಜನಾ ವೆಚ್ಚದ 10% ಅಥವಾ ರೂ.10 ಕೋಟಿಗಳು, ಯಾವುದು ಕಡಿಮೆಯೋ ಅದು | ಯೋಜನಾ ವೆಚ್ಚದ 40% ಅಥವಾ ರೂ.20 ಕೋಟಿಗಳು, ಯಾವುದು ಕಡಿಮೆಯೋ ಅದು<br>ಯೋಜನಾ ವೆಚ್ಚದ 10% ಅಥವಾ ರೂ.10 ಕೋಟಿಗಳು, ಯಾವುದು ಕಡಿಮೆಯೋ ಅದು |

<table>
<tr><th>ಕ್ರ ಸಂ.</th><th>ಪ್ರೋತ್ಸಾಹಕ ಧನ</th><th>ವಲಯ 1</th><th>ವಲಯ 2</th></tr>
<tr><td></td><td></td><td></td><td></td></tr>
<tr><td>6</td><td>ಬ್ರೌನ್ ಫೀಲ್ಡ್ ಸಮೂಹ ಅಭಿವೃದ್ಧಿ</td><td colspan="2">ಯೋಜನಾ ವೆಚ್ಚದ 40% ಅಥವಾ ರೂ.12 ಕೋಟಿಗಳು, ಯಾವುದು ಕಡಿಮೆಯೋ ಅದು</td></tr>
<tr><td>7</td><td>ಹಿಂದುಳಿದ ಪ್ರದೇಶಗಳಲ್ಲಿ ನಿರ್ದಿಷ್ಟ ಜವಳಿ ವಲಯಗಳು</td><td colspan="2">ನಿರ್ದಿಷ್ಟ ಜವಳಿ ವಲಯಗಳಲ್ಲಿ ಸಾಮಾನ್ಯ ಮೂಲಭೂತ ಸೌಕರ್ಯಗಳಿಗಾಗಿ, ಯೋಜನಾ ವೆಚ್ಚದ 40% ಅಥವಾ ರೂ. 25 ಕೋಟಿಗಳು, ಯಾವುದು ಕಡಿಮೆಯೋ ಅದು. ಹಂಚಿಕೆಯ 10% ಹಣವನ್ನು ವಲಯಕ್ಕೆ ವಿದ್ಯುತ್ ಸಂಪರ್ಕ ಒದಗಿಸಲು ಬಳಸಲಾಗುವುದು.<br>ಕೆಳಗಿನ ಸಾಲ ಸಂಪರ್ಕ ಬಂಡವಾಳ ಸಹಾಯಧನವನ್ನು ನಿರ್ದಿಷ್ಟ ಜವಳಿ ವಲಯಗಳ ಘಟಕಗಳಿಗೆ ನೀಡಲಾಗುವುದು:
<table>
<tr><th>ಬಂಡವಾಳ ಆವರಣ</th><th>ಪ್ರೋತ್ಸಾಹ ಧನದ ಪ್ರಮಾಣ</th></tr>
<tr><td>ಎಮ್‌ಎಸ್‌ಎಮ್‌ಇ ಯೋಜನೆಗಳು (ರೂ. 10 ಕೋಟಿಗಳ ತನಕ)</td><td>ಸ್ಥಿರಾಸ್ತಿಗಳ 20%</td></tr>
<tr><td>ರೂ.5 ಕೋಟಿಯಿಂದ ರೂ.25 ಕೋಟಿ</td><td>ಸ್ಥಿರಾಸ್ತಿಗಳ 20% ಅಥವಾ ರೂ.3 ಕೋಟಿ, ಯಾವುದು ಕಡಿಮೆಯೋ ಅದು.</td></tr>
<tr><td>ರೂ.26 ಕೋಟಿಯಿಂದ ರೂ.50 ಕೋಟಿ</td><td>ಸ್ಥಿರಾಸ್ತಿಗಳ 20% ಅಥವಾ ರೂ.4 ಕೋಟಿ, ಯಾವುದು ಕಡಿಮೆಯೋ ಅದು.</td></tr>
<tr><td>ರೂ. 51 ಕೋಟಿಯಿಂದ ರೂ.99 ಕೋಟಿ</td><td>ಸ್ಥಿರಾಸ್ತಿಗಳ 20% ಅಥವಾ ರೂ.6 ಕೋಟಿ, ಯಾವುದು ಕಡಿಮೆಯೋ ಅದು.</td></tr>
</table>
ಪ್ರೋತ್ಸಾಹ ನೀಡಿದ ವಿಭಾಗ (2)ರಲ್ಲಿ ಉಲ್ಲೇಖಿಸಿರುವಂತೆ ಘಟಕಗಳಿಗೆ ಬಡ್ಡಿ ಸಹಾಯಧನವು ಅನ್ವಯಿಸುವುದು.</td></tr>
<tr><td>8</td><td>ವಿದ್ಯುತ್ ಸಹಾಯಧನ<br>(i) ತಾಂತ್ರಿಕ ಜವಳಿಯನ್ನೊಳಗೊಂಡ ಜವಳಿಯ ಎಲ್ಲಾ ಮೌಲ್ಯ ಸರಣಿಯ ಚಟುವಟಿಕೆ<br>(ii) ಗ್ರೀನ್ ಫೀಲ್ಡ್ ಜವಳಿ ಪಾರ್ಕುಗಳು/ ಬ್ರೌನ್ ಫೀಲ್ಡ್ ಸಮೂಹ ಅಭಿವೃದ್ಧಿ/ ಹಿಂದುಳಿದ ಪ್ರದೇಶಗಳಲ್ಲಿ ನಿರ್ದಿಷ್ಟ ಜವಳಿ ವಲಯಗಳಲ್ಲಿನ ಇಟಿಪಿ ಘಟಕಗಳಿಗೆ</td><td colspan="2">ಪ್ರತಿ ಯುನಿಟ್ ಗೆ ರೂ 1.00 ರಂತೆ ವಿದ್ಯುತ್ ವೆಚ್ಚದ ಮರುಪಾವತಿ<br>* ಹೈ–ಟೆಕ್ ವಿದ್ಯುತ್ ಮಗ್ಗ ಘಟಕಗಳ ಸಂದರ್ಭದಲ್ಲಿ ವಿದ್ಯುತ್ ಸಂಪರ್ಕವು 20 ಎಚ್‌ಪಿ ಗಿಂತ ಹೆಚ್ಚಿರಬೇಕು.<br>ಪ್ರತಿ ಘಟಕಕ್ಕೆ ರೂ 1.00 ರಂತೆ ವಿದ್ಯುತ್ ವೆಚ್ಚದ ಮರುಪಾವತಿ</td></tr>
<tr><td>9</td><td>ಸಾಮಾನ್ಯ ಎಫ್ಲ್ಯುಯೆಂಟ್ ಟ್ರೀಟ್ಮೆಂಟ್ ಸ್ಥಾವರ ಮತ್ತು ಅಪಾಯಕಾರಿ ತ್ಯಾಜ್ಯ ವಿಲೇವಾರಿ ಸೌಲಭ್ಯ</td><td colspan="2">(a) ಯೋಜನಾ ವೆಚ್ಚದ 50% ಅಥವಾ ರೂ.5.00 ಕೋಟಿ, ಯಾವುದು ಕಡಿಮೆಯೋ ಅದು<br>(b) ಕೈಮಗ್ಗ ಕ್ಷೇತ್ರಕ್ಕೆ – ಯೋಜನಾ ವೆಚ್ಚದ 80% ಅಥವಾ ರೂ.1.00 ಕೋಟಿ, ಯಾವುದು ಕಡಿಮೆಯೋ ಅದು.<br>(c ) ಕೇಂದ್ರ ಸರ್ಕಾರದ ಯಾವುದೇ ಯೋಜನೆಯ ಸಹಾಯ ಪಡೆದ ಯೋಜನೆಗಳಿಗೆ – ಯೋಜನಾ ವೆಚ್ಚದ 20% ಅಥವಾ ರೂ.5.00 ಕೋಟಿ, ಯಾವುದು ಕಡಿಮೆಯೋ ಅದು.</td></tr>
<tr><td>10</td><td>ಮೆಗಾ ಯೋಜನೆಗಳು</td><td colspan="2">ಕೆಳಗೆ ಉಲ್ಲೇಖಿಸಿರುವ ಪ್ರೋತ್ಸಾಹ ಧನದ ಒಟ್ಟಾರೆ ಮೊತ್ತವು ಯೋಜನಾ ವೆಚ್ಚದ 15% ಅಥವಾ ರೂ. 50 ಕೋಟಿ, ಯಾವುದು ಕಡಿಮೆಯೋ ಅದು.<br>(a) ಸಾಲ ಸಂಪರ್ಕ ಬಂಡವಾಳ ಧನಸಹಾಯ – ಯೋಜನಾ ವೆಚ್ಚದ 10% ಅಥವಾ ರೂ. 10 ಕೋಟಿ, ಯಾವುದು ಕಡಿಮೆಯೋ ಅದು.<br>(b) ರಾಜ್ಯ ತೆರಿಗೆಗಳು, ಸುಂಕಗಳು & ಶಾಸನಬದ್ಧ ತೆರಿಗೆಗಳ ಖರ್ಚಿನ ಮರುಪಾವತಿ – ಒಟ್ಟು ಪ್ರಮಾಣದ ತೆರಿಗೆಯನ್ನು ರಾಜ್ಯ ಮತ್ತು ಸ್ಥಳೀಯ ತೆರಿಗೆ ಮತ್ತು ಲೆವಿಯಿಂದ (ಮಾರಾಟ ತೆರಿಗೆ, ವಹಿವಾಟು ತೆರಿಗೆ, ಕೆಲಸ ಒಪ್ಪಂದ ತೆರಿಗೆ, ಸೆಸ್ ಇತ್ಯಾದಿ ಸೇರಿದಂತೆ) ಆಕರಣೆ ಮೇಲೆ 10% ವರೆಗೆ.<br>(c) ಎಂಪ್ಲಾಯೀಸ್ ಸ್ಟೇಟ್ ಇನ್ಶೂರೆನ್ಸ್/ ಎಂಪ್ಲಾಯೀಸ್ ಪ್ರಾವಿಡೆಂಟ್ ಫಂಡ್‌ನ ಮರುಪಾವತಿ – ನೌಕರನ ಇಎಸ್‌ಐ ಮತ್ತು ಇಪಿಎಫ್ ಖಾತೆಗೆ ಮಾಲೀಕರ ಕೊಡುಗೆಯ 50% ವರೆಗೆ ಮರುಪಾವತಿ.<br>(d) ಪ್ರವೇಶ ತೆರಿಗೆಯ ಮರುಪಾವತಿ – ಘಟಕಗಳ ಅಗತ್ಯಕ್ಕನುಸಾರವಾಗಿ ಸ್ಥಾವರ ಮತ್ತು ಯಂತ್ರದ ಮೇಲಿನ ಪ್ರವೇಶ ತೆರಿಗೆಯ 100%.</td></tr>
</table>

<table>
<tr><th>ಕ್ರ ಸಂ.</th><th>ಪ್ರೋತ್ಸಾಹಕ ಧನ</th><th>ವಲಯ 1</th><th>ವಲಯ 2</th></tr>
<tr><td></td><td></td><td colspan="2">(e) ಮುದ್ರಾಂಕ ಸುಂಕದ ಮರುಪಾವತಿ – ಭೂಮಿ, ಸಾಲ, ದುಡಿಮೆ ಬಂಡವಾಳ, ಕಾನೂನು ದಾಖಲೆಗಳ ಮತ್ತು ಯಾವುದೇ ಇತರ ಯೋಜನಾ ದಾಖಲೆಗಳ ಮೇಲಿನ ಮುದ್ರಾಂಕ ಸುಂಕದ 100%.<br>(f) ವಿದ್ಯುತ್ ಧನಸಹಾಯ – ತಾಂತ್ರಿಕ ಜವಳಿ ಸೇರಿದಂತೆ ಜವಳಿ ಮೌಲ್ಯ ಸರಣಿಯ ಎಲ್ಲಾ ಚಟುವಟಿಕೆಗಳಿಗೆ ಪ್ರತಿ ಯುನಿಟ್ ಗೆ ರೂ.1.00 ರಂತೆ ವಿದ್ಯುತ್ ವೆಚ್ಚದ ಮರುಪಾವತಿ. ಹೈ–ಟೆಕ್ ವಿದ್ಯುತ್ ಮಗ್ಗ ಘಟಕಗಳ ಸಂದರ್ಭದಲ್ಲಿ ವಿದ್ಯುತ್ ಸಂಪರ್ಕವು 20 ಎಚ್‌ಪಿಗಿಂತ ಹೆಚ್ಚಿರಬೇಕು.</td></tr>
<tr><td>11</td><td>ಸಾಮರ್ಥ್ಯ ವರ್ಧಕ ಬೆಂಬಲ<br>(i) ಮಾರುಕಟ್ಟೆಯ ಅಭಿವೃದ್ಧಿ ಮತ್ತು ಬ್ರ್ಯಾಂಡಿಂಗ್<br>(ii) ವಿನ್ಯಾಸ ಅಭಿವೃದ್ಧಿ ಮತ್ತು ಉತ್ಪನ್ನ ವೈವಿಧ್ಯೀಕರಣ<br>(iii) ಗುಣಮಟ್ಟಗಳು ಮತ್ತು ಅನುಸರಣೆಗಳು</td><td colspan="2">ಪ್ರಸ್ತಾಪಿತ ವೆಚ್ಚದ 50% ಮರುಪಾವತಿ ಅಥವಾ ರೂ. 50 ಲಕ್ಷ, ಯಾವುದು ಕಡಿಮೆಯೋ ಅದು.<br>ಪ್ರಸ್ತಾಪಿತ ವೆಚ್ಚದ 50% ಮರುಪಾವತಿ ಅಥವಾ ರೂ. 25 ಲಕ್ಷ, ಯಾವುದು ಕಡಿಮೆಯೋ ಅದು.<br>ಪ್ರಸ್ತಾಪಿತ ವೆಚ್ಚದ 50% ಮರುಪಾವತಿ ಅಥವಾ ರೂ. 5 ಲಕ್ಷ, ಯಾವುದು ಕಡಿಮೆಯೋ ಅದು.</td></tr>
<tr><td>12</td><td>ಅಸ್ತಿತ್ವದಲ್ಲಿರುವ ಘಟಕಗಳ ಪರಿಸರ ಅನುಸರಣೆ ಮತ್ತು ಸಂಪನ್ಮೂಲ ಸಂರಕ್ಷಣೆಗಾಗಿ ನೆರವು (3 ವರ್ಷಗಳಿಗೂ ಹೆಚ್ಚಿನ ಹಳೆಯ ಘಟಕಗಳು)</td><td colspan="2">ಪ್ರತ್ಯೇಕವಾಗಿ ಪ್ರತೀ ಸಂದರ್ಭದಲ್ಲಿ ಅನ್ವಯವಾಗುವ ಇಂಧನ ಪರಿಶೀಲನೆ / ಜಲ ಪರಿಶೀಲನೆ / ಪರಿಸರ ಅನುಸರಣೆಗಾಗಿ 50% ವರೆಗೆ, ಗರಿಷ್ಠ ರೂ.50000 ನೆರವು.</td></tr>
<tr><td>13</td><td>ಉತ್ಕೃಷ್ಟತೆಯ ಕೇಂದ್ರ</td><td colspan="2">ರಾಜ್ಯದಲ್ಲಿ ಜವಳಿ ಉತ್ಕೃಷ್ಟತೆಯ ಕೇಂದ್ರವನ್ನು ಸ್ಥಾಪಿಸುವುದಕ್ಕಾಗಿ ರೂ.10 ಕೋಟಿ ನೆರವು.</td></tr>
<tr><td>14</td><td>ಅಸ್ತಿತ್ವದಲ್ಲಿರುವ ಘಟಕಗಳಿಗೆ (ವಿಸ್ತರಣೆ/ವೈವಿಧ್ಯತೆ/ಆಧುನೀಕರಣ/ತಾಂತ್ರಿಕ ಉನ್ನತೀಕರಣ)</td><td colspan="2">(a) ಸಾಲ ಸಂಪರ್ಕ ಬಂಡವಾಳ ಸಹಾಯಧನ – ಸ್ಥಾವರ & ಯಂತ್ರ<table><tr><th>ವಲಯ 1</th><th>ವಲಯ 2</th></tr><tr><td>ಸ್ಥಾವರ & ಯಂತ್ರದ ಮೌಲ್ಯದ 20% ಅಥವಾ ರೂ. 1 ಕೋಟಿ, ಯಾವುದು ಕಡಿಮೆಯೋ ಅದು.</td><td>ಸ್ಥಾವರ & ಯಂತ್ರದ ಮೌಲ್ಯದ 15% ಅಥವಾ ರೂ. 75 ಲಕ್ಷ, ಯಾವುದು ಕಡಿಮೆಯೋ ಅದು.</td></tr></table>(b) ಬಡ್ಡಿ ಸಹಾಯಧನ<br>ಹೊಸ ಘಟಕಗಳಿಗೆ ಇರುವ ಮಾದರಿಯಲ್ಲಿಯೇ ವಿಸ್ತರಿಸುವುದು. ಒದಗಿಸಿದ ಬಡ್ಡಿ ಸಹಾಯಧನವು ಸಾಲ ಸಂಪರ್ಕ ಬಂಡವಾಳ ಸಹಾಯಧನ (14–ಎ) ವಿಭಾಗದಲ್ಲಿ ಉಲ್ಲೇಖಿಸಿರುವಂತೆ ಇರುವ ಮಿತಿಯನ್ನು ಯಾವುದೇ ಸಂದರ್ಭದಲ್ಲಿ ಮೀರುವುದಿಲ್ಲ.</td></tr>
</table>

**(16) ಸಾಮಾಜಿಕ ಬದ್ಧತೆಯನ್ನು ಉತ್ತಮಗೊಳಿಸುವತ್ತ ಪ್ರಯತ್ನ**

ಸಾಮಾಜಿಕ ಬದ್ಧತೆ ಮತ್ತು ಮಾನವ ಅಭಿವೃದ್ಧಿ ಸೂಚ್ಯಂಕವನ್ನು ಉತ್ತಮಗೊಳಿಸುವ ಪ್ರಯತ್ನವು ಕರ್ನಾಟಕ ಸರಕಾರದ ಒಂದು ಭಾಗವಾಗಿರುವುದರಿಂದ, ಅನುಮೋದಿತ ಪ್ರೋತ್ಸಾಹ ಧನದ ಹೆಚ್ಚುವರಿ 5%, ಗರಿಷ್ಠ ರೂ.5.00 ಲಕ್ಷ, ಸಾಮಾಜಿಕ ಬದ್ಧತೆ ಮತ್ತು ಮಾನವ ಅಭಿವೃದ್ಧಿಯ ಅನುಸರಣೆಯನ್ನು ಸಂಧಿಸಲು ಯೋಜನೆಯ ಪ್ರಸ್ತಾಪಕರಿಗೆ ಬಿಡುಗಡೆಯಾಗುವುದು. ಈ ಮಧ್ಯಪ್ರವೇಶಕ್ಕಾಗಿ ಮೈಲುಗಲ್ಲುಗಳು / ಉಪಯುಕ್ತತೆಯ ಮಾನದಂಡಗಳನ್ನು ಮಾರ್ಗಸೂಚಿಗಳಲ್ಲಿ ಕೈಮಗ್ಗ ಮತ್ತು ಜವಳಿ ಇಲಾಖೆಯು ನಿಗದಿಪಡಿಸುವುದು.

**(17) ಹೊರತುಪಡಿಸುವಿಕೆ ಮತ್ತು ಸಡಿಲಿಕೆಗಳು**

(a) ವಲಯ 3 ಪ್ರದೇಶಗಳಲ್ಲಿ ಸ್ಥಾಪಿತವಾಗುವ ಎಲ್ಲಾ ಹೊಸ ಘಟಕಗಳು ಜವಳಿ ನೀತಿ 2013–2018 ರಡಿ ಪ್ರೋತ್ಸಾಹಧನಕ್ಕೆ ಅರ್ಹರಾಗುವುದಿಲ್ಲ.

(b) ಆದರೆ, ಎಸ್‌ಪಿವಿ ಗಳು / ಯೋಜನಾ ಪ್ರಸ್ತಾಪಕರಿಗೆ ಈ ಕೆಳಗಿನ ಸಹಾಯಗಳನ್ನು ಪ್ರಸ್ತಾಪಿಸಿದ ಸಹಾಯವು ಯಾವ ವಲಯಗಳಲ್ಲಿ ಕಾರ್ಯಗತಗೊಳಿಸಿರುವುದೆಂದು ಗಣನೆಗೆ ತೆಗೆದುಕೊಳ್ಳದೇ, ಒದಗಿಸಲಾಗುವುದು.

- (i) ಬ್ರೌನ್ ಫೀಲ್ಡ್ ಸಮೂಹ ಅಭಿವೃದ್ಧಿ
- (ii) ಸಾಮಾನ್ಯ ಎಫ್ಲ್ಯುಯೆಂಟ್ ಟ್ರೀಟ್ಮೆಂಟ್ ಪ್ಲ್ಯಾಂಟ್ & ಅಪಾಯಕಾರಿ ತ್ಯಾಜ್ಯ ವಿಲೇವಾರಿ ಸೌಕರ್ಯ
- (iii) ಸಾಮರ್ಥ್ಯ ವರ್ಧಕ ಬೆಂಬಲ
- (iv) ಮಾನವ ಸಂಪನ್ಮೂಲ ಮತ್ತು ಪರಿಸರ ಅಂಗೀಕಾರಕ್ಕಾಗಿ ನೆರವು

(ಅ) **ಕ್ರೆಡಿಟ್ ಲಿಂಕ್ಡ್ ಬಂಡವಾಳ ಅನುದಾನ**

(i) **ಉದ್ದೇಶ:** ಉತ್ಪಾದನಾ ತಂತ್ರಜ್ಞಾನವನ್ನು ಆಧುನೀಕರಿಸಿ ಬೆಳವಣಿಕೆಯನ್ನು ರಾಜ್ಯಾದ್ಯಂತ ಚದುರಿಸುವ ಮೂಲಕ ಮತ್ತು ರಾಜ್ಯದಲ್ಲಿ ಜವಳಿ ಮತ್ತು ಉಡುಪುಗಳ ಉದ್ಯಮದಲ್ಲಿ ಹೊಸ ಹೂಡಿಕೆಗಳನ್ನು ಆಕರ್ಷಿಸುವುದು.

(ii) **ಅರ್ಹತೆ:** ಈ ಕೆಳಗಿನವು ಅರ್ಹವಾಗಿರುವವು;

(aa) **ಸ್ಥಿರ ಆಸ್ತಿಗಳ ಮೇಲೆ ಕ್ರೆಡಿಟ್ ಲಿಂಕ್ಡ್ ಬಂಡವಾಳ ಅನುದಾನ** – ಘಟಕವು ಸ್ಥಾಪಿಸಿದ ಸ್ಥಿರ ಆಸ್ತಿಗಳ ಮೌಲ್ಯದ ಮೇಲೆ ಲಭ್ಯವಾಗುವುದು.

(bb) **ವಿಶೇಷ ಕ್ರೆಡಿಟ್ ಲಿಂಕ್ಡ್ ಬಂಡವಾಳ ಅನುದಾನ (ತಾಂತ್ರಿಕ ಜವಳಿ, ಸಂಯೋಜಿತ ಘಟಕಗಳು ಮತ್ತು ಪರಿಸರ ಸ್ನೇಹಿ ಘಟಕಗಳು)** – ಘಟಕವು ಪಡೆದುಕೊಂಡ ಅರ್ಹ ಸ್ಥಾವರ ಮತ್ತು ಯಂತ್ರೋಪಕರಣಗಳ (ಪ್ಲಾಂಟ್ & ಮೆಶಿನರಿ) ಮೌಲ್ಯದ ಮೇಲೆ ಲಭ್ಯವಾಗುವುದು.

(iii) **ಯೋಜನೆಯ ವೆಚ್ಚ / ಸ್ಥಿರ ಆಸ್ತಿಗಳ ವ್ಯಾಖ್ಯಾನ :** ನೀತಿಯ ಅನ್ವಯ ಪ್ರೋತ್ಸಾಹಧನವನ್ನು ಲೆಕ್ಕಮಾಡುವ ಉದ್ದೇಶಕ್ಕಾಗಿ, ಯೋಜನೆಯ ವೆಚ್ಚ / ಸ್ಥಿರ ಆಸ್ತಿಗಳನ್ನು ಯೋಜನೆಗಾಗಿ ಸ್ಥಾಪಿಸಿದ ಸ್ವತ್ತುಗಳು ಎಂದು ವರ್ಣಿಸಲಾಗುವುದು ಹಾಗೂ ಇದು ಸಾರಿಗೆ, ನಿರ್ಮಾಣ ಮತ್ತು ವಿದ್ಯುದೀಕರಣದೊಂದಿಗೆ ಕಾರ್ಖಾನೆ ಕಟ್ಟಡ, ಮೂಲಭೂತ ಸೌಕರ್ಯಗಳು (ಭೂಮಿ ಮತ್ತು ಭೂ ಅಭಿವೃದ್ಧಿಯ ಹೊರತಾಗಿ), ಸ್ಥಾವರ ಮತ್ತು ಯಂತ್ರೋಪಕರಣಗಳು ಮತ್ತಿತರ ಉತ್ಪಾದಕ ಸ್ವತ್ತುಗಳನ್ನು ಒಳಗೊಳ್ಳುವುದು.

(iv) **ನಿಧೀಕರಣ:** ಯೋಜನಾ ಅವಧಿಯಲ್ಲಿ ಕ್ರೆಡಿಟ್ ಲಿಂಕ್ಡ್ ಬಂಡವಾಳ ಅನುದಾನವನ್ನು ಘಟಕಗಳಿಗೆ ಈ ಕೆಳಗಿನಂತೆ ಒದಗಿಸಲಾಗುವುದು;

(aa) **ಸ್ಥಿರ ಆಸ್ತಿಗಳ ಮೇಲೆ ಕ್ರೆಡಿಟ್ ಲಿಂಕ್ಡ್ ಬಂಡವಾಳ ಅನುದಾನ**

➢ **ವಲಯ 1:**

| **ಹೂಡಿಕೆಯ ಪರಿಮಾಣ** | **ಪ್ರೋತ್ಸಾಹಕ ಧನದ ಮೊತ್ತ** |
|---|---|
| ಎಮ್.ಎಸ್.ಎಮ್.ಈ ಯೋಜನೆಗಳು (ರೂ. 10 ಕೋಟಿಗಳವರೆಗೆ) | ಸ್ಥಿರ ಆಸ್ತಿಗಳ 20% |
| ರೂ.10 ಕೋಟಿಯಿಂದ ರೂ.25 ಕೋಟಿ | ಸ್ಥಿರ ಆಸ್ತಿಗಳ 20% ಅಥವಾ ರೂ. 3.00 ಕೋಟಿ ಇವುಗಳಲ್ಲಿ ಯಾವುದು ಕಡಿಮೆಯೋ ಅದು. |
| ರೂ.26 ಕೋಟಿಯಿಂದ ರೂ.50 ಕೋಟಿ | ಸ್ಥಿರ ಆಸ್ತಿಗಳ 20% ಅಥವಾ ರೂ. 4.00 ಕೋಟಿ ಇವುಗಳಲ್ಲಿ ಯಾವುದು ಕಡಿಮೆಯೋ ಅದು. |
| ರೂ.51 ಕೋಟಿಯಿಂದ ರೂ.99 ಕೋಟಿ | ಸ್ಥಿರ ಆಸ್ತಿಗಳ 20% ಅಥವಾ ರೂ. 6.00 ಕೋಟಿ ಇವುಗಳಲ್ಲಿ ಯಾವುದು ಕಡಿಮೆಯೋ ಅದು. |

➢ **ವಲಯ 2:**

| **ಹೂಡಿಕೆಯ ಆವರಣ** | **ಪ್ರೋತ್ಸಾಹಕ ಧನದ ಮೊತ್ತ** |
|---|---|
| ಎಮ್.ಎಸ್.ಎಮ್.ಈ ಯೋಜನೆಗಳು (ರೂ. 10 ಕೋಟಿಗಳವರೆಗೆ) | ಸ್ಥಿರ ಆಸ್ತಿಗಳ 15% |
| ರೂ.10 ಕೋಟಿಯಿಂದ ರೂ.25 ಕೋಟಿ | ಸ್ಥಿರ ಆಸ್ತಿಗಳ 15% ಅಥವಾ ರೂ. 2.00 ಕೋಟಿ ಇವುಗಳಲ್ಲಿ ಯಾವುದು ಕಡಿಮೆಯೋ ಅದು |
| ರೂ.26 ಕೋಟಿಗಳಿಂದ ರೂ. 50 ಕೋಟಿಗಳು | ಸ್ಥಿರ ಆಸ್ತಿಗಳ 15% ಅಥವಾ ರೂ. 3.00 ಕೋಟಿಗಳಲ್ಲಿ ಕಡಿಮೆ ಇದ್ದುದು |
| ರೂ.51 ಕೋಟಿಗಳಿಂದ ರೂ. 99 ಕೋಟಿಗಳು | ಸ್ಥಿರ ಆಸ್ತಿಗಳ 15% ಅಥವಾ ರೂ. 5.00 ಕೋಟಿಗಳಲ್ಲಿ ಕಡಿಮೆ ಇದ್ದುದು |

➢ ಕೇಂದ್ರ / ರಾಜ್ಯ ಸರ್ಕಾರಗಳ ಯೋಜನೆಗಳ ಮೂಲಕ ಭಾಗಶಃ ಸಹಾಯ ಪಡೆದ ಜವಳಿ ಉದ್ಯಾನಗಳಲ್ಲಿ (ಟೆಕ್ಸ್‌ಟೈಲ್ ಪಾರ್ಕಗಳಲ್ಲಿ) ಸ್ಥಿತವಿರುವ ಎಲ್ಲಾ ಘಟಕಗಳು, ಸ್ಥಳವನ್ನು ಗಮನಕ್ಕೆ ತೆಗೆದುಕೊಳ್ಳದಂತೆ, ಪ್ರತಿ ಘಟಕಕ್ಕೆ 5% ಅಥವಾ ರೂ.10 ಲಕ್ಷಗಳಲ್ಲಿ ಕಡಿಮೆಯಿರುವ ಮೊತ್ತದ ಹೆಚ್ಚುವರಿ ಅನುದಾನಕ್ಕೆ ಅರ್ಹವಾಗುವವು.

➢ ಪ.ಜಾ/ಪ.ವ. ದ ವ್ಯಕ್ತಿಯು ನಡೆಸುತ್ತಿರುವ ಎಲ್ಲಾ ಘಟಕಗಳು, ಸ್ಥಳವನ್ನು ಗಮನಕ್ಕೆ ತೆಗೆದುಕೊಳ್ಳದಂತೆ, ಪ್ರತಿ ಘಟಕಕ್ಕೆ 20% ಅಥವಾ ರೂ. 20 ಲಕ್ಷಗಳಲ್ಲಿ ಕಡಿಮೆಯಿರುವ ಮೊತ್ತದ ಹೆಚ್ಚುವರಿ ಅನುದಾನಕ್ಕೆ ಅರ್ಹವಾಗುವವು.

➢ ಅಂಗವಿಕಲರು/ ಅಲ್ಪಸಂಖ್ಯಾತರು/ ಮಾಜಿ ಸೈನಿಕರು ಮತ್ತು ಮಹಿಳಾ ಉದ್ಯಮಿಗಳು ನಡೆಸುತ್ತಿರುವ ಎಲ್ಲಾ ಘಟಕಗಳು, ಸ್ಥಳವನ್ನು ಗಮನಕ್ಕೆ ತೆಗೆದುಕೊಳ್ಳದಂತೆ, ಪ್ರತಿ ಘಟಕಕ್ಕೆ 5% ಅಥವಾ ರೂ. 5 ಲಕ್ಷಗಳಲ್ಲಿ ಕಡಿಮೆಯಿರುವ ಮೊತ್ತದ ಹೆಚ್ಚುವರಿ ಅನುದಾನಕ್ಕೆ ಅರ್ಹವಾಗುವವು.

(bb) **ವಿಶೇಷ ಕ್ರೆಡಿಟ್ ಲಿಂಕ್ಡ್ ಬಂಡವಾಳ ಅನುದಾನ (ತಾಂತ್ರಿಕ ಜವಳಿ, ಸಂಯೋಜಿತ ಘಟಕಗಳು ಮತ್ತು ಪರಿಸರ ಸ್ನೇಹಿ ಘಟಕಗಳು)**

➢ **ತಾಂತ್ರಿಕ ಜವಳಿ ಘಟಕಗಳು**

ಸ್ಥಳವನ್ನು ಗಮನಕ್ಕೆ ತೆಗೆದುಕೊಳ್ಳದಂತೆ, ಎಲ್ಲಾ ತಾಂತ್ರಿಕ ಜವಳಿ ಘಟಕಗಳು, ಸ್ಥಾವರ ಮತ್ತು ಯಂತ್ರೋಪಕರಣಗಳ ಮೌಲ್ಯದ ಮೇಲೆ 10% ಅಥವಾ ರೂ.25 ಲಕ್ಷಗಳಲ್ಲಿ ಕಡಿಮೆಯಿರುವ ಮೊತ್ತದ ಹೆಚ್ಚುವರಿ ಅನುದಾನಕ್ಕೆ ಅರ್ಹವಾಗುವವು.

➢ **ಸಂಯೋಜಿತ ಘಟಕಗಳು**

| | |
|---|---|
| ವಲಯ 1 | ಅರ್ಹ ಸ್ಥಾವರ ಮತ್ತು ಯಂತ್ರೋಪಕರಣಗಳ ಮೇಲೆ 20% ಅಥವಾ ರೂ. 30 ಲಕ್ಷಗಳಲ್ಲಿ ಕಡಿಮೆಯಿರುವ ಮೊತ್ತದ ಹೆಚ್ಚುವರಿ ಬಂಡವಾಳ ಹೂಡಿಕೆ ಅನುದಾನ. |
| ವಲಯ 2 | ಅರ್ಹ ಸ್ಥಾವರ ಮತ್ತು ಯಂತ್ರೋಪಕರಣಗಳ ಮೇಲೆ 10% ಅಥವಾ ರೂ. 20 ಲಕ್ಷಗಳಲ್ಲಿ ಕಡಿಮೆಯಿರುವ ಮೊತ್ತದ ಹೆಚ್ಚುವರಿ ಬಂಡವಾಳ ಹೂಡಿಕೆ ಅನುದಾನ. |

➢ **ಪರಿಸರ ಸ್ನೇಹಿ ಘಟಕಗಳು**

ಸ್ಥಳವನ್ನು ಗಮನಕ್ಕೆ ತೆಗೆದುಕೊಳ್ಳದಂತೆ ಎಲ್ಲಾ ಘಟಕಗಳು, ಸ್ವಚ್ಛ ಮತ್ತು ಪರಿಸರ ಸ್ನೇಹಿ ತಂತ್ರಜ್ಞಾನಗಳ ಉತ್ತೇಜನಕ್ಕಾಗಿ ಸ್ಥಾಪಿಸಿದ ಸ್ಥಾವರ ಮತ್ತು ಯಂತ್ರೋಪಕರಣಗಳ ಮೌಲ್ಯದ ಮೇಲೆ 20% ಅಥವಾ ರೂ. 20 ಲಕ್ಷಗಳಲ್ಲಿ ಕಡಿಮೆಯಿರುವ ಮೊತ್ತದ ಹೆಚ್ಚುವರಿ ಅನುದಾನಕ್ಕೆ ಅರ್ಹವಾಗುವವು. ಸ್ಥಾಪನೆಯನ್ನು ಪರಿಸರ ಸ್ನೇಹಿಯಾಗಿಸುವತ್ತ ಮಾಡಿದ ಹೆಚ್ಚುವರಿ ಹೂಡಿಕೆಗಳ ಮೇಲೆ ಮಾತ್ರ ಈ ಪ್ರೋತ್ಸಾಹಧನವನ್ನು ನೀಡಲಾಗುವುದು. ಅಂತಹ ಸ್ಥಾವರ ಮತ್ತು ಯಂತ್ರೋಪಕರಣಗಳನ್ನು ಕರ್ನಾಟಕ ಮಾಲಿನ್ಯ ನಿಯಂತ್ರಣಾ ಮಂಡಳಿಯು ದೃಢೀಕರಿಸತಕ್ಕದ್ದು.

(ಆ) **ಬಡ್ಡಿ ಅನುದಾನ**

(i) **ಉದ್ದೇಶ:** ಜವಳಿ ಘಟಕಗಳಿಗೆ ತೊಂದರೆ ರಹಿತ ಕಾರ್ಯಾಚರಣೆಗಾಗಿ ನೆರವಾಗಲು ಘಟಕಗಳಿಗೆ ಬಡ್ಡಿ ಅನುದಾನದ ರೂಪದಲ್ಲಿ ಆರ್ಥಿಕ ನೆರವು ನೀಡಲಾಗುವುದು.

(ii) **ಅರ್ಹತೆ:** ಈ ಕೆಳಗಿನವರು ಅರ್ಹವಾಗಿರುವರು;

(aa) ನೀತಿಯ ಅವಧಿಯಲ್ಲಿ ರಾಜ್ಯದಲ್ಲಿ ರೂ.99 ಕೋಟಿ ವರೆಗಿನ ಹೂಡಿಕೆಯೊಂದಿಗೆ ಹೊಸ ಘಟಕಗಳನ್ನು ಸ್ಥಾಪಿಸುತ್ತಿರುವ ಉದ್ಯಮಿಗಳು ಬೆಂಬಲವನ್ನು ಕೇಳಲು ಮತ್ತು ಪಡೆಯಲು ಅರ್ಹರಾಗಿರುವರು.

(bb) ನೀತಿಯ ಅವಧಿಯಲ್ಲಿ ವಾಣಿಜ್ಯ ಉತ್ಪಾದನೆಯನ್ನು ಪ್ರಾರಂಭಿಸುವ ಘಟಕಗಳಿಗೆ ಮಾತ್ರ ಬೆಂಬಲವನ್ನು ನೀಡಲಾಗುವುದು ಹಾಗೂ ಸಾಲದ ಮೊದಲ ಮರುಪಾವತಿಯ ದಿನದಿಂದ ಐದು ವರ್ಷಗಳ ಅವಧಿಗೆ ಲಭ್ಯವಾಗಿರುವುದು. ಬ್ಯಾಂಕಿನೊಂದಿಗೆ ಸಾಲ ಖಾತೆಯು ನಿಯಮಿತವಾಗಿರುವ, ಅಂದರೆ ಸಾಲದ ನೆರವಿನಡಿಯಲ್ಲಿ ಬ್ಯಾಂಕಿಗೆ ಎಲ್ಲಾ ಪಾವತಿಗಳನ್ನು ಮಾಡಿರುವ ಸಂದರ್ಭದಲ್ಲಿ ಮಾತ್ರ ಈ ಅನುದಾನವನ್ನು ಪಾವತಿಸಲಾಗುವುದು.

(iii) **ನಿಧೀಕರಣ:** ಪರಿಚ್ಛೇಧ (1)ರನ್ವಯ ಸಾಮಾನ್ಯ ವರ್ಗಕ್ಕೆ ಅನ್ವಯಿಸುವ ಕ್ರೆಡಿಟ್ ಲಿಂಕ್ಡ್ ಬಂಡವಾಳ ಅನುದಾನದ ಮೊತ್ತವನ್ನು ಇಂಟರೆಸ್ಟ್ ಲಿಂಕ್ಡ್ ಅನುದಾನಕ್ಕಾಗಿ ಈ ಕೆಳಗಿನಂತೆ ವರ್ಗೀಕರಿಸಲಾಗುವುದು:

(aa) ಅವಶ್ಯ ಅಭಿವೃದ್ಧಿ ಮೈಲುಗಲ್ಲನ್ನು ಪೂರೈಸುವ ಮೇರೆಗೆ ಅನುಮೋದಿತ ಮೊತ್ತದ 50%.

(bb) ಬ್ಯಾಂಕುಗಳು / ಹಣಕಾಸು ಸಂಸ್ಥೆಗಳ ಅವಶ್ಯ ಹಣಕಾಸು ಮೈಲುಗಲ್ಲುಗಳನ್ನು ಪೂರೈಸುವ ಮೇರೆಗೆ ಅನುಮೋದಿತ ಮೊತ್ತದ 50% ಐದು ವರ್ಷದ ಬಡ್ಡಿ ಸಹಾಯಧನ.

(iv) ಒದಗಿಸಿದ ಬಡ್ಡಿ ಸಹಾಯಧನವು ಪ್ರೋತ್ಸಾಹ ನೀಡುವ ವಿಭಾಗ (1)ರಲ್ಲಿನ ಮೊತ್ತದಲ್ಲಿ ಉಲ್ಲೇಖಿಸಿರುವಂತೆ ಯಾವುದೇ ಸಂದರ್ಭದಲ್ಲಿ ಮಿತಿಯನ್ನು ಮೀರುವುದಿಲ್ಲ.

(ಇ) **ಪ್ರವೇಶ ತೆರಿಗೆ ಮರುಪಾವತಿ**

(i) **ಉದ್ದೇಶ:** ಸೂಕ್ತ ಉತ್ಪಾದನಾ ತಂತ್ರಜ್ಞಾನವನ್ನು ಪಡೆಯುವ ಮತ್ತು ಉತ್ಪಾದನಾ ಉದ್ದೇಶಗಳಿಗಾಗಿ ಅದನ್ನು ರಾಜ್ಯದ ಒಳಗೆ ಸಾಗಿಸುವ ಖರ್ಚನ್ನು ಕಡಿಮೆಗೊಳಿಸುವುದು.

(ii) **ಅರ್ಹತೆ:** ಈ ಕೆಳಗಿನ ಭಾಗಗಳ ಮೇಲೆ ಪ್ರವೇಶ ತೆರಿಗೆಯ ಮರುಪಾವತಿ ಮಾಡಲಾಗುವುದು;

(aa) ಸ್ಥಾವರ ಮತ್ತು ಯಂತ್ರೋಪಕರಣಗಳು ಮತ್ತು ಬಂಧಿತ ವಿದ್ಯುತ್ ಉತ್ಪಾದನೆಗಾಗಿ ಉಪಕರಣಗಳು ಮತ್ತು ಸಾಮಾನ್ಯ ತ್ಯಾಜ್ಯಜಲದ ಉಪಚಾರ (ಕಾಮನ್ ಎಫ್ಲೂಎಂಟ್ ಟ್ರೀಟ್ಮೆಂಟ್)ಗೆ ಬಳಸುವ ಉಪಕರಣಗಳು ಮತ್ತು ತ್ಯಾಜ್ಯ ವಿಲೇವಾರಿ ಸೌಲಭ್ಯಗಳನ್ನು ಒಳಗೊಂಡಂತೆ ಬಂಡವಾಳ ಸರಕುಗಳು.

(iii) **ನಿಧೀಕರಣ:** ಸರಕು ಪಟ್ಟಿ (ಇನ್ವಾಯ್ಸ್) ದಾಖಲೆಯ ಅನುಸಾರ ಉದ್ಯಮಿಗಳು ಮಾಡಿದ ವಾಸ್ತವಿಕ ಪಾವತಿಗಳ ಮೇಲೆ ಮರುಪಾವತಿ ಮಾಡಲಾಗುವುದು.

(ಈ) **ಮುದ್ರಾಂಕ ಸುಂಕದ ಮರುಪಾವತಿ**

(i) **ಉದ್ದೇಶ:** ರಾಜ್ಯದಲ್ಲಿ ಭೂಮಿಯ ಗಳಿಕೆ / ಭೋಗ್ಯ ಮತ್ತು ಇತರ ಯೋಜನೆ / ಆರ್ಥಿಕ ದಾಖಲೆಗಳ ನಿರ್ವಹಣೆಗೆ ಸಂಬಂಧಿಸಿದಂತೆ ವಹಿವಾಟು ವೆಚ್ಚವನ್ನು ಕಡಿತಗೊಳಿಸುವುದು.

(ii) **ಅರ್ಹತೆ:** ಯೋಜನೆಯ ಅವಧಿಯಲ್ಲಿ ಪಾವತಿಸಿದ ಮುದ್ರಾಂಕ ಸುಂಕದ ಮರುಪಾವತಿಯನ್ನು ಕೇಳಲು ಈ ಕೆಳಗಿನವರು ಅರ್ಹವಾಗಿರುವರು;

(aa) ಹೊಸ ಘಟಕಗಳನ್ನು ಸ್ಥಾಪಿಸುತ್ತಿರುವ ಮತ್ತು ಭೂಮಿಯನ್ನು ಗಳಿಸಲು ವ್ಯವಸ್ಥೆಗಳನ್ನು ಮಾಡುತ್ತಿರುವ ಉದ್ಯಮಿಗಳು.

(bb) ಹಿಂದುಳಿದ ಪ್ರದೇಶಗಳ ಯಾವುದೇ ಒಂದು ವಲಯದಲ್ಲಿ / ನಿಗದಿತ ಸ್ಥಳಗಳಲ್ಲಿ ಗ್ರೀನ್‌ಫಿಲ್ಡ್ / ಬ್ರೌನ್‌ಫೀಲ್ಡ್ ಅಥವಾ ಜವಳಿ ಉದ್ಯಾನಗಳನ್ನು ಅಭಿವೃದ್ಧಿ ಪಡಿಸುವ ಉದ್ದೇಶಕ್ಕಾಗಿ ಬಳಕೆದಾರ ಉದ್ಯಮ / ಅಥವಾ ಕೈಗಾರಿಕಾ ಸಂಘಟನೆಗಳ ಕನಿಷ್ಠ 5 ಮಂದಿ ಸದಸ್ಯರೊಂದಿಗೆ ಸ್ಥಾಪಿಸಿದ ಎಸ್.ಪಿ.ವಿ.ಗಳು.

(iii) **ಮರುಪಾವತಿ ಅಂಗಗಳು:** ಮುದ್ರಾಂಕ ಸುಂಕದ ಮರುಪಾವತಿಗಳು ಈ ಕೆಳಗಿನ ಅಂಶಗಳಿಗೆ ಸಂಬಂಧಿಸಿದಂತೆ ಲಭ್ಯವಾಗಿರುವವು;

(aa) ಹಂಚಿಕೆಯಾಗಿರುವ ಕೈಗಾರಿಕಾ ಭೂಮಿ / ಜಾಗಗಳಿಗೆ ಸಂಬಂಧಿಸಿದಂತೆ ಭೋಗ್ಯ, ಭೋಗ್ಯ ಮತ್ತು ಮಾರಾಟ ಒಪ್ಪಂದಗಳು.

(bb) ಭೋಗ್ಯದಲ್ಲಿ ಪಡೆದ ಕೈಗಾರಿಕಾ ಶೆಡ್‌ಗಳು / ಜಾಗಗಳಿಗೆ ಸಂಬಂಧಿಸಿದಂತೆ ಭೋಗ್ಯ ಒಪ್ಪಂದಗಳು.

(cc) ಬ್ಯಾಂಕುಗಳು / ಆರ್ಥಿಕ ಸಂಸ್ಥೆಗಳು ಮತ್ತು ಕರ್ನಾಟಕ ಸರ್ಕಾರ / ಭಾರತ ಸರ್ಕಾರದ ಇತರ ಸಂಸ್ಥೆಗಳಿಂದ ದೀರ್ಘಾವಧಿ ನಿಧಿಗಳನ್ನು ಪಡೆಯುವ ಉದ್ದೇಶದಿಂದ ಕೈಗೊಳ್ಳಲಾದ ಒತ್ತೆ ಒಪ್ಪಂದ, ಗಿರವಿ ಒಪ್ಪಂದ ಇತ್ಯಾದಿಯಂಥ ಭದ್ರತಾ ದಾಖಲೆಗಳನ್ನು ಒಳಗೊಂಡ ಸಾಲ ಮತ್ತು ಕಡ ಒಪ್ಪಂದಗಳ ಸಂಬಂಧದಲ್ಲಿ.

(iv) **ನಿಧೀಕರಣ:** ಉದ್ಯಮಿಗಳು/ ಎಸ್.ಪಿ.ವಿ ಮಾಡಿದ ವಾಸ್ತವಿಕ ಪಾವತಿಗಳ ಮೇಲೆ ಈ ಕೆಳಗಿನಂತೆ ಮರುಪಾವತಿ ಮಾಡಲಾಗುವುದು;

(aa) **ವಲಯ 1:** ಮುದ್ರಾಂಕ ಸುಂಕವಾಗಿ ಪಾವತಿಸಿದ ಪೂರ್ಣ ಮೊತ್ತದ ಮರುಪಾವತಿ.

(bb) **ವಲಯ 2:** ಮುದ್ರಾಂಕ ಸುಂಕವಾಗಿ ಪಾವತಿಸಿದ ಮೊತ್ತದ 50% ಮರುಪಾವತಿ.

(ಉ) **ಗ್ರೀನ್‌ಫೀಲ್ಡ್ ಜವಳಿ ಉದ್ಯಾನಗಳ ಸಾಮಾನ್ಯ ಮೂಲಭೂತ ಸೌಕರ್ಯಗಳು**

(i) **ಉದ್ದೇಶ:** ರಾಜ್ಯದಲ್ಲಿ ಗ್ರೀನ್‌ಫೀಲ್ಡ್ ಜವಳಿ ಮತ್ತು ಉಡುಪುಗಳ ಕೈಗಾರಿಕಾ ಉದ್ಯಾನಗಳನ್ನು ಅಭಿವೃದ್ಧಿಗೊಳಿಸಲು ಒಂದು ಸಮೂಹ ಆಧಾರಿತ ಅಭಿವೃದ್ಧಿ ತಂತ್ರದ ಅನುಸರಣೆಯನ್ನು ಮುಂದುವರಿಸಲಾಗಿದೆ. ಈ ಉದ್ಯಾನಗಳು / ವಲಯಗಳು ಸಂಯೋಜಿತ ಜವಳಿಗೆ ಅಗತ್ಯವಿರುವ ಉತ್ಪಾದನಾ ಸೌಲಭ್ಯಗಳನ್ನು, ಅಂದರೆ ನೂಲುವಿಕೆ, ನೇಯುವಿಕೆ, ಪರಿಷ್ಕರಣೆ, ಉಡುಪು ತಯಾರಿಕೆ ಮತ್ತು ಇತರ ಪೂರಕ ಘಟಕಗಳನ್ನು ಅಥವಾ ವಲಯಕ್ಕೆ ನಿರ್ದಿಷ್ಟವಾದ ಚಟುವಟಿಕೆಗಳಾದ ನೇಯುವಿಕೆ ಅಥವಾ ಪರಿಷ್ಕರಣೆ ಇತ್ಯಾದಿಯನ್ನು ಹೊಂದಬಹುದಾಗಿದೆ. ಇಂಥ ಗ್ರೀನ್‌ಫೀಲ್ಡ್ ಜವಳಿ ಉದ್ಯಾನಗಳು ವೆಚ್ಚ ಕಡಿತ, ಹೆಚ್ಚಿನ ಗುಣಮಟ್ಟ ಮತ್ತು ಒಟ್ಟಾರೆ ಸ್ಪರ್ಧಾತ್ಮಕತೆಯನ್ನು ಗಳಿಸುವಲ್ಲಿ ಉದ್ಯಮಕ್ಕೆ ಸಹಾಯವನ್ನೊದಗಿಸುತ್ತವೆ.

(ii) **ಅರ್ಹತೆ:** ಈ ಕೆಳಗಿನ ಅಂಶಗಳಿಗೆ ಸಂಬಂಧಿಸಿದಂತೆ, ಉದ್ಯಮಿಗಳ ತಂಡವನ್ನೊಳಗೊಂಡ ಬಳಕೆದಾರ ಉದ್ಯಮವು ರಚಿಸಿದ ಎಸ್.ಪಿ.ವಿ.ಯು ಬೆಂಬಲ ಸಹಾಯಧನಕ್ಕಾಗಿ ಅರ್ಹವಾಗಿರುವುದು;

(aa) ಅಭಿವೃದ್ಧಿಯಲ್ಲಿರುವ ಜವಳಿ ಉದ್ಯಾನವು ಕನಿಷ್ಠ 15 ಎಕರೆ ಗಾತ್ರದ್ದಾಗಿರತಕ್ಕದ್ದು. ತಾಂತ್ರಿಕ ಜವಳಿ ಉದ್ಯಾನವಾಗಿದ್ದಲ್ಲಿ ಕನಿಷ್ಠ 10 ಎಕರೆ ಗಾತ್ರವನ್ನು ಹೊಂದಿರತಕ್ಕದ್ದು.

(bb) ಎಸ್.ಪಿ.ವಿ.ಯನ್ನು ರಚಿಸಲು ಬಳಕೆದಾರ ಉದ್ಯಮದಿಂದ ಕನಿಷ್ಠ 5 ಮಂದಿ ಉದ್ಯಮಿಗಳು ಸೇರತಕ್ಕದ್ದು. ಸಂಘಟನೆಗಳೂ ಸಹ ಸದಸ್ಯರಾಗಿ ಎಸ್.ಪಿ.ವಿ.ಯನ್ನು ಸೇರಬಹುದು.

(cc) ಯೋಜನೆಯನ್ನು ಕಾರ್ಯಗತಗೊಳಿಸುವಾಗ ಎಸ್.ಪಿ.ವಿ.ಯು 100% ಈಕ್ವಿಟಿ ಹೊಂದಿರತಕ್ಕದ್ದು. ಯೋಜನೆಯು ಪೂರ್ಣಗೊಂಡ ನಂತರ ಎಸ್.ಪಿ.ವಿ.ಯು ಕನಿಷ್ಠ 51% ಈಕ್ವಿಟಿ ಹೊಂದುವುದು ಮತ್ತು ಬಾಕಿ 49%ವನ್ನು ಕಾರ್ಯತಂತ್ರದ ಪಾಲುದಾರರು / ಅಭಿವರ್ಧಕರು / ಸರಕಾರದ ಸಂಸ್ಥೆಗಳು ಇತ್ಯಾದಿ ಹೊಂದಬಹುದು. ಯೋಜನೆಯನ್ನು ಕಾರ್ಯಗತಗೊಳಿಸುವಾಗ ಎಸ್.ಪಿ.ವಿ.ಯು ತನ್ನ ಈಕ್ವಿಟಿ ಆರ್ಥಿಕಾಸಕ್ತಿಯನ್ನು ಕಡಿಮೆಗೊಳಿಸಲು ಬಯಸಿದ ಸಂದರ್ಭದಲ್ಲಿ, ಈ ಕುರಿತು ಕರ್ನಾಟಕ ಸರ್ಕಾರದ ಕೈಮಗ್ಗ ಮತ್ತು ಜವಳಿ ಇಲಾಖೆಯಿಂದ ಪೂರ್ವಾನುಮತಿ ಪಡೆದೇ ಮುಂದುವರಿಯತಕ್ಕದ್ದು.

(dd) ಬಳಕೆದಾರ ಉದ್ಯಮವು ಎಸ್.ಪಿ.ವಿ.ಯಲ್ಲಿ ಕನಿಷ್ಠ 51% ಈಕ್ವಿಟಿ ಹೊಂದಿರತಕ್ಕದ್ದು, ಬಾಕಿ 49%ವನ್ನು ಕಾರ್ಯತಂತ್ರದ ಪಾಲುದಾರರು / ಅಭಿವರ್ಧಕರು / ಸರಕಾರದ ಸಂಸ್ಥೆಗಳು ಇತ್ಯಾದಿ ಹೊಂದಬಹುದು.

(iii) **ಅನುದಾನಕ್ಕೆ ಈ ಕೆಳಗಿನ ಅಂಗಗಳು ಅರ್ಹವಾಗಿರುವವು;**

**(aa)** **ಕಾರ್ಖಾನೆ ಕಟ್ಟಡ**

**(bb)** **ಕೆಳಗೆ ನೀಡಿರುವಂಥ ಸಾಮಾನ್ಯ ಮೂಲಭೂತ ಸೌಕರ್ಯಗಳು**

- ಕಾಂಪೌಂಡಿನ ಗೋಡೆ ಮತ್ತು ನಿವೇಶನ ಅಭಿವೃದ್ಧಿ
- ರಸ್ತೆಗಳು
- ಚರಂಡಿ ವ್ಯವಸ್ಥೆ
- ಚರಂಡಿ ಉಪಚಾರ ಸ್ಥಾವರ
- ನೀರು ಸರಬರಾಜು
- ವಿದ್ಯುತ್ ಉತ್ಪಾದನೆ ಸ್ಥಾವರ / ಪರ್ಯಾಯ ವಿದ್ಯುತ್ ಮೂಲವನ್ನು ಒಳಗೊಂಡಂತೆ ವಿದ್ಯುತ್ ಸರಬರಾಜು
- ಸಾಮಾನ್ಯ ತ್ಯಾಜ್ಯಜಲದ ಉಪಚಾರ ಸ್ಥಾವರ (ಕಾಮನ್ ಎಫ್ಲೂಎಂಟ್ ಟ್ರೀಟ್ಮೆಂಟ್ ಪ್ಲಾಂಟ್)
- ತ್ಯಾಜ್ಯ ವಿಲೇವಾರಿ ಸೌಲಭ್ಯಗಳು
- ದೂರಸಂಪರ್ಕ ವ್ಯವಸ್ಥೆಗಳು
- ವಿದ್ಯುತ್, ಜಲ ಮತ್ತು ಉದ್ಯಾನದ ಬಾಗಿಲಿನವರೆಗೆ ಸಂಪರ್ಕ ನೀಡುವ ರಸ್ತೆಗಳನ್ನೊಳಗೊಂಡಂತೆ ಬಾಹ್ಯ ಸೌಕರ್ಯ
- ಅಗತ್ಯದ ಆಧಾರದ ಮೇಲೆ ಇತರ ಯಾವುದೇ ಮೂಲಭೂತ ಸೌಕರ್ಯ

**(cc)** **ಕೆಳಗೆ ನೀಡಿರುವಂಥ ಸಾಮಾನ್ಯ ಸೌಲಭ್ಯಗಳಿಗಾಗಿ ಕಟ್ಟಡ:**

- ಪರೀಕ್ಷಣಾ ಪ್ರಯೋಗಾಲಯ
- ವಿನ್ಯಾಸ ಕೇಂದ್ರ
- ತರಬೇತಿ ಕೇಂದ್ರ
- ವ್ಯಾಪಾರ/ ಪ್ರದರ್ಶನ ಕೇಂದ್ರ
- ಗೋದಾಮು ಸೌಲಭ್ಯ
- ಕಚ್ಚಾ ವಸ್ತು ಸಂಗ್ರಹಾಲಯ
- ಶಿಶುವಿಹಾರ, ಉಪಹಾರಗೃಹ, ನಿದ್ರಾಶಾಲೆಗಳು, ಮನೋರಂಜನೆ ಸೌಲಭ್ಯ ಇತ್ಯಾದಿಯಂಥ ಕಾರ್ಮಿಕ ಸೌಲಭ್ಯಗಳು
- ಸೇವೆ ಒದಗಿಸುವವರ ಕಛೇರಿ ಕಟ್ಟಡಗಳು
- ಬ್ಯಾಂಕುಗಳು / ಏ.ಟಿ.ಎಂ, ಇತ್ಯಾದಿಗಾಗಿ ಕಟ್ಟಡಗಳು.
- ಅಗ್ನಿಶಾಮಕ ಇತ್ಯಾದಿಗಾಗಿ ಕಟ್ಟಡಗಳು.

ಯೋಜನೆಗಳಿಗಾಗಿ ಇರುವ ಭೂಮಿಯು ಪ್ರೋತ್ಸಾಹ ಧನದ ನಿಧೀಕರಣಕ್ಕಾಗಿ ಅರ್ಹವಾಗುವುದಿಲ್ಲ; ಆದರೆ, ಬ್ಯಾಂಕ್ / ಆರ್ಥಿಕ ಸಂಸ್ಥೆಗಳ ಅನುಮೋದನೆಗಾಗಿ ಅಗತ್ಯವಿರುವಂತೆ ಯೋಜನೆಯ ವೆಚ್ಚದ ಭಾಗವಾಗಬಹುದು ಮತ್ತು ಉದ್ಯಮಿಗಳು ಸ್ವಯಂ ಇದರಲ್ಲಿ ನಿಧಿ ಹೂಡಬಹುದು.

(iv) **ನಿಧೀಕರಣ:** ಈ ಕೆಳಗಿನ ಆಧಾರದ ಮೇಲೆ ಗ್ರೀನ್‌ಫೀಲ್ಡ್ ಉದ್ಯಾನಗಳಲ್ಲಿ ಸಾಮಾನ್ಯ ಮೂಲಭೂತ ಸೌಕರ್ಯಗಳ ಅಭಿವೃದ್ಧಿಗಾಗಿ ಎಸ್.ಪಿ.ವಿ.ಗೆ ಒಮ್ಮೆ ಬೆಂಬಲ ಸಹಾಯಧನವನ್ನು ಒದಗಿಸಲಾಗುವುದು.

**(aa)** <u>ವಲಯ 1:</u> ಪ್ರತಿ ಉದ್ಯಾನ ಯೋಜನೆಗೆ, ಯೋಜನಾ ವೆಚ್ಚದ 40% ಅಥವಾ ರೂ.20.00 ಕೋಟಿಗಳವರೆಗೆ ಇವುಗಳಲ್ಲಿ ಕಡಿಮೆಯಿರುವ ಮೊತ್ತ.

**(bb)** <u>ವಲಯ 2:</u> ಪ್ರತಿ ಉದ್ಯಾನ ಯೋಜನೆಗೆ, ಯೋಜನಾ ವೆಚ್ಚದ 20% ಅಥವಾ ರೂ.15.00 ಕೋಟಿಗಳವರೆಗೆ ಇವುಗಳಲ್ಲಿ ಕಡಿಮೆಯಿರುವ ಮೊತ್ತ.

(v) ಯಾವುದೇ ಕೇಂದ್ರ ಸರ್ಕಾರದ ಯೋಜನೆಯ ಅಡಿಯಲ್ಲಿ ಯೋಜನೆಗಳು ಈಗಾಗಲೇ ಅನುಮೋದನೆ ಪಡೆದಿದ್ದು ನಿಧೀಕರಣ ಮಾಡುತ್ತಿರುವ ಸಂದರ್ಭದಲ್ಲಿ ಹಾಗೂ ನೀತಿಯ ಅವಧಿಯಲ್ಲಿ ಅಂಥ ಯೋಜನೆಗಳಡಿಯಲ್ಲಿ ಹೊಸ ಅನುಮೋದನೆ ಪಡೆದಿದ್ದ ಸಂದರ್ಭದಲ್ಲಿ, ಅಂಥ ಉದ್ಯಾನ ಯೋಜನೆಗಳಿಗೆ ಪೂರಕ ರಾಜ್ಯ ಸರ್ಕಾರದ ಪ್ರೋತ್ಸಾಹಧನವಾಗಿ ಕೇವಲ ಯೋಜನೆಯ ವೆಚ್ಚದ 10% ಅಥವಾ ರೂ. 10.00 ಕೋಟಿ ಇವುಗಳಲ್ಲಿ ಕಡಿಮೆಯಿರುವ ಮೊತ್ತವನ್ನು ಹೆಚ್ಚುವರಿಯಾಗಿ ನೀಡಲಾಗುವುದು.

(vi) ಸರ್ಕಾರದಿಂದ ಬೆಂಬಲ ಸಹಾಯಧನವನ್ನು ನಾಲ್ಕು ಸಮಾನ ಕಂತುಗಳಲ್ಲಿ ನೀಡಲಾಗುವುದು.

(vii) ಸಂಭಾವ್ಯ ಉದ್ಯಮಿಗಳ ಗುರುತಿಸುವಿಕೆ, ಎಸ್.ಪಿ.ವಿ.ಗಳ ಸ್ಥಾಪನೆ ಮತ್ತು ಯೋಜನೆಯ ಅನುಷ್ಠಾನಕ್ಕಾಗಿ ವೃತ್ತಿಪರ ನೆರವಿನ ಅಗತ್ಯವಿರುವುದರಿಂದ "ಕಾನ್ಸೆಪ್ಟ್ ಟು ಕಮೀಶನಿಂಗ್" ಆಧಾರದ ಮೇಲೆ ಯೋಜನೆಯ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಸಹಾಯ ಮಾಡಲು ಸರ್ಕಾರವು ವೃತ್ತಿಪರ ಸಲಹೆಗಾರರನ್ನು ನಿಯಮಾನುಸಾರ ತೊಡಗಿಸಿಕೊಳ್ಳುವುದು.

(viii) ಪ್ರೋತ್ಸಾಹಧನದ ವಿತರಣೆಗಾಗಿ ಮೈಲಿಗಲ್ಲುಗಳನ್ನು ನೀತಿಯ ಕಾರ್ಯಾಚರಣೆ ಕೈಪಿಡಿಯಲ್ಲಿ ವಿವರಿಸಲಾಗುವುದು. ಇದು ಅನುಕ್ರಮದ ಅಭಿವೃದ್ಧಿ ಮೈಲಿಗಲ್ಲುಗಳನ್ನೂ ಸಹ ನಿಗದಿಪಡಿಸುವುದು.

(ಊ) **ಬ್ರೌನ್ ಫೀಲ್ಡ್ ಸಮೂಹ ಅಭಿವೃದ್ಧಿ**

(i) **ಉದ್ದೇಶ:** ಜವಳಿ ಘಟಕಗಳನ್ನು ಹೊಂದಿರುವ ಹಾಲಿ ಇರುವ ಕೈಗಾರಿಕಾ ಪ್ರದೇಶಗಳಿಗಾಗಿ ಸಮೂಹ ಆಧಾರಿತ ಅಭಿವೃದ್ಧಿ ತಂತ್ರವನ್ನು ಅಳವಡಿಸಿಕೊಳ್ಳಲು ವಲಯದ ಸುಸ್ಥಿರ ಬೆಳವಣಿಗೆಯನ್ನು ಮುಂದುರಿಸಲು ಮತ್ತು ವಿಸ್ತರಣೆ ಅಥವಾ ತಂತ್ರಜ್ಞಾನದ ಉನ್ನತೀಕರಣದ ಮೂಲಕ ಅಂತರಾಷ್ಟ್ರೀಯವಾಗಿ ಸ್ಪರ್ಧಾತ್ಮಕವಾಗಲು ನೆರವಾಗುವುದು.

(ii) **ಅರ್ಹತೆ:** ಈ ಕೆಳಗಿನವು ಅರ್ಹವಾಗಿರುವವು;

(aa) ಕನಿಷ್ಠ 5 ಜವಳಿ ಘಟಕಗಳನ್ನು ಹೊಂದಿರುವ ಪ್ರಸಕ್ತ ಕೈಗಾರಿಕಾ ಪ್ರದೇಶಗಳಿಗಾಗಿ ಸಿ.ಇ.ಟಿ.ಪಿ / ಎಸ್.ಟಿ.ಪಿ ಇತ್ಯಾದಿಯಂಥ ಸಾಮಾನ್ಯ ಸೌಲಭ್ಯಗಳ ಅಭಿವೃದ್ಧಿಯ ಉದ್ದೇಶಕ್ಕಾಗಿ ಬಳಕೆದಾರ ಕೈಗಾರಿಕೆ ಮತ್ತು / ಅಥವಾ ಕೈಗಾರಿಕಾ ಸಂಘಟನೆಗಳಿಂದ ಕನಿಷ್ಠ 5 ಸದಸ್ಯರೊಂದಿಗೆ ಸ್ಥಾಪನೆಯಾದ ಎಸ್.ಪಿ.ವಿ.ಗಳು.

(bb) ಸಾಮಾನ್ಯ ಮೂಲಭೂತ ಸೌಕರ್ಯಗಳು ಎಂದರೆ ಸಿ.ಇ.ಟಿ.ಪಿ, ಎಸ್.ಟಿ.ಪಿ, ಪರೀಕ್ಷಣಾ ಸೌಲಭ್ಯಗಳು ಇತ್ಯಾದಿ.

(iii) **ನಿಧೀಕರಣ:** ಈ ಕೆಳಗಿನ ಆಧಾರದ ಮೇಲೆ ಬ್ರೌನ್‌ಫೀಲ್ಡ್ ಸಮೂಹಕ್ಕಾಗಿ ಅವುಗಳಿರುವ ವಲಯವನ್ನು ಗಮನಕ್ಕೆ ತೆಗೆದುಕೊಳ್ಳದಂತೆ, ಸಾಮಾನ್ಯ ಮೂಲಭೂತ ಸೌಕರ್ಯಗಳ ಅಭಿವೃದ್ಧಿಗಾಗಿ ಎಸ್.ಪಿ.ವಿ.ಗೆ ಒಮ್ಮೆ ಬೆಂಬಲ ಸಹಾಯಧನವನ್ನು ಒದಗಿಸಲಾಗುವುದು.

(aa) ಪ್ರತಿ ಕೈಗಾರಿಕಾ ಭೂಮಿ ಯೋಜನೆಗೆ, ಯೋಜನಾ ವೆಚ್ಚದ 40% ವರೆಗೆ, ಅಥವಾ ರೂ. 12.00 ಕೋಟಿ ಇವುಗಳಲ್ಲಿ ಕಡಿಮೆಯಿರುವ ಮೊತ್ತ.

(bb) ಪ್ರೋತ್ಸಾಹಧನದ ವಿತರಣೆಗಾಗಿ ಮೈಲಿಗಲ್ಲುಗಳನ್ನು ನೀತಿಯ ಕಾರ್ಯಾಚರಣೆ ಕೈಪಿಡಿಯಲ್ಲಿ ವಿವರಿಸಲಾಗುವುದು. ಇದು ಅನುಕ್ರಮದ ಅಭಿವೃದ್ಧಿ ಮೈಲಿಗಲ್ಲುಗಳನ್ನೂ ಸಹ ನಿಗದಿಪಡಿಸುವುದು.

(ಋ) **ಹಿಂದುಳಿದ ಪ್ರದೇಶಗಳಲ್ಲಿ ನಿರ್ದಿಷ್ಟ ಜವಳಿ ವಲಯಗಳು**

(i) **ಉದ್ದೇಶ:** ನೆರೆಹೊರೆಯ ರಾಜ್ಯಗಳಿಂದ ರಾಜ್ಯದೊಳಗೆ ಹೊಸ ಹೂಡಿಕೆಗಳನ್ನು ಆಕರ್ಷಿಸುವುದು ಮತ್ತು ಬೆಳವಣಿಗೆಗೆ ಸಂಬಂಧಿಸಿದಂತೆ ಜವಳಿ ವಲಯಕ್ಕೆ ಬೆಂಬಲ ನೀಡುವುದು.

(ii) **ಅರ್ಹತೆ:** ಈ ಕೆಳಗಿನವು ಅರ್ಹವಾಗಿರುವವು;

(aa) ಬಳಕೆದಾರ ಉದ್ಯಮದ ಮೂಲಕ/ಕ್ಕಾಗಿ ರಚನೆಯಾದ ಎಸ್.ಪಿ.ವಿ.ಯು ಈ ಬೆಂಬಲವನ್ನು ಪಡೆಯಲು ಅರ್ಹವಾಗಿರುವುದು.

(bb) ಒಂದು ಯೋಜನೆಯು ಹಿಂದುಳಿದ ಪ್ರದೇಶದಲ್ಲಿ ನಿರ್ದಿಷ್ಟ ಜವಳಿ ವಲಯವಾಗಿ ಅರ್ಹತೆ ಪಡೆಯಲು ಕನಿಷ್ಠ 50 ಎಕರೆಗಳ ಭೂಮಿಯ ಅಗತ್ಯವಿರುವುದು.

(cc) ಅಭಿವೃದ್ಧಿ ಉದ್ದೇಶಗಳಿಗಾಗಿ ಒಬ್ಬ ಆಂಕರ್ ಹೂಡಿಕೆದಾರ ಅಥವಾ ಆಂಕರ್ ಹೂಡಿಕೆದಾರರು / ಉದ್ಯಮಿಗಳ ಒಂದು ಗುಂಪು ಎಸ್.ಪಿ.ವಿ.ಯನ್ನು ರಚಿಸಬಹುದು.

(dd) ಯೋಜನೆಯನ್ನು ಕಾರ್ಯಗತಗೊಳಿಸುವಾಗ ಎಸ್.ಪಿ.ವಿ.ಯು 100% ಈಕ್ವಿಟಿ ಹೊಂದಿರತಕ್ಕದ್ದು. ಯೋಜನೆಯು ಪೂರ್ಣಗೊಂಡ ನಂತರ ಎಸ್.ಪಿ.ವಿ.ಯು ಕನಿಷ್ಠ 51% ಈಕ್ವಿಟಿ ಹೊಂದುವುದು ಮತ್ತು ಬಾಕಿ 49%ವನ್ನು ಕಾರ್ಯತಂತ್ರದ ಪಾಲುದಾರರು / ಅಭಿವರ್ಧಕರು / ಸರಕಾರದ ಸಂಸ್ಥೆಗಳು ಇತ್ಯಾದಿ ಹೊಂದಬಹುದು. ಯೋಜನೆಯನ್ನು ಕಾರ್ಯಗತಗೊಳಿಸುವಾಗ ಎಸ್.ಪಿ.ವಿ.ಯು ತನ್ನ ಈಕ್ವಿಟಿ ಆರ್ಥಿಕಾಸಕ್ತಿಯನ್ನು ಕಡಿಮೆಗೊಳಿಸಲು ಬಯಸಿದ ಸಂದರ್ಭದಲ್ಲಿ, ಈ ಕುರಿತು ಕರ್ನಾಟಕ ಸರ್ಕಾರದ ಕೈಮಗ್ಗಗಳು ಮತ್ತು ಜವಳಿ ವಿಭಾಗದಿಂದ ಪೂರ್ವಾನುಮತಿ ಪಡೆದೇ ಮುಂದುವರಿಯತಕ್ಕದ್ದು.

(ee) ಬಳಕೆದಾರ ಉದ್ಯಮವು ಎಸ್.ಪಿ.ವಿ.ಯಲ್ಲಿ ಕನಿಷ್ಠ 51% ಈಕ್ವಿಟಿ ಹೊಂದಿರತಕ್ಕದ್ದು, ಬಾಕಿ 49% ವನ್ನು ಕಾರ್ಯತಂತ್ರದ ಪಾಲುದಾರರು / ಅಭಿವರ್ಧಕರು / ಸರಕಾರದ ಸಂಸ್ಥೆಗಳು ಇತ್ಯಾದಿ ಹೊಂದಬಹುದು.

(iii) **ನಿಧೀಕರಣ:**

- ಹಿಂದುಳಿದ ಪ್ರದೇಶಗಳಲ್ಲಿ ನಿರ್ದಿಷ್ಟ ಜವಳಿ ವಲಯಗಳನ್ನು ಸ್ಥಾಪಿಸುವ ಸಲುವಾಗಿ ಯೋಜನಾ ವೆಚ್ಚದ 40% ಅಥವಾ ರೂ. 25.00 ಕೋಟಿ ಇವುಗಳಲ್ಲಿ ಕಡಿಮೆಯಿರುವ ಮೊತ್ತ.
- ಪ್ರಸ್ತಾವಿತ ವಿತರಣೆಯ 10% ಮೊತ್ತವನ್ನು ವಲಯಕ್ಕೆ ಸಮರ್ಪಕ ವಿದ್ಯುತ್ ಸಂಪರ್ಕವನ್ನು ಖಚಿತಪಡಿಸುವತ್ತ ಖರ್ಚು ಮಾಡಬೇಕಾಗುವುದು. ಬಳಕೆಯಾಗದ ಮೊತ್ತವಿರುವ ಸಂದರ್ಭದಲ್ಲಿ ಅದನ್ನು ಇತರ ಸೌಕರ್ಯಗಳ ಪೂರೈಕೆಗೆ ಬಳಸತಕ್ಕದ್ದು. ಪ್ರಸ್ತಾವಿತ ವಿದ್ಯುತ್ ಸಂಪರ್ಕ ಸೌಲಭ್ಯಗಳ ವೆಚ್ಚವು ನಿಗದಿತ 10% ವನ್ನು ಮೀರಿದ ಸಂದರ್ಭದಲ್ಲಿ, ಅಂಥ ಮೊತ್ತವನ್ನು ಎಸ್.ಪಿ.ವಿ. ಇತರ ಮೂಲಗಳಿಂದ ಪಡೆಯುವುದು.
- ಹಿಂದುಳಿದ ಪ್ರದೇಶಗಳಲ್ಲಿರುವ ನಿರ್ದಿಷ್ಟ ಜವಳಿ ವಲಯಗಳ ಘಟಕಗಳಿಗೆ ಈ ಕೆಳಗಿನ ಕೋಷ್ಟಕದಲ್ಲಿ ತೋರಿಸಿರುವ ಹೂಡಿಕೆ ಮಜಲುಗಳ ಅನುಸಾರ ಕ್ರೆಡಿಟ್ ಲಿಂಕ್ಡ್ ಬಂಡವಾಳ ಅನುದಾನವನ್ನು ನೀಡಲಾಗುವುದು:

| ಹೂಡಿಕೆಯ ಪರಿಮಾಣ | ಪ್ರೋತ್ಸಾಹಕ ಧನದ ಮೊತ್ತ |
|---|---|
| ಎಮ್.ಎಸ್.ಎಮ್.ಇ ಯೋಜನೆಗಳು (ರೂ. 10 ಕೋಟಿಗಳವರೆಗೆ) | ಸ್ಥಿರ ಆಸ್ತಿಗಳ 20% |
| ರೂ.10 ಕೋಟಿಗಳಿಂದ ರೂ. 25 ಕೋಟಿಗಳು | ಸ್ಥಿರ ಆಸ್ತಿಗಳ 20% ಅಥವಾ ರೂ. 3.00 ಕೋಟಿ ಇವುಗಳಲ್ಲಿ ಯಾವುದು ಕಡಿಮೆಯೋ ಅದು. |
| ರೂ.26 ಕೋಟಿಗಳಿಂದ ರೂ. 50 ಕೋಟಿಗಳು | ಸ್ಥಿರ ಆಸ್ತಿಗಳ 20% ಅಥವಾ ರೂ. 4.00 ಕೋಟಿ ಇವುಗಳಲ್ಲಿ ಯಾವುದು ಕಡಿಮೆಯೋ ಅದು. |
| ರೂ.51 ಕೋಟಿಗಳಿಂದ ರೂ. 99 ಕೋಟಿಗಳು | ಸ್ಥಿರ ಆಸ್ತಿಗಳ 20% ಅಥವಾ ರೂ. 6.00 ಕೋಟಿ ಇವುಗಳಲ್ಲಿ ಯಾವುದು ಕಡಿಮೆಯೋ ಅದು. |

- ಘಟಕಗಳಿಗೆ ಅನುಮೋದಿತ ಬಂಡವಾಳ ಅನುದಾನ ಮೊತ್ತದ 50% ದವರೆಗಿನ ಬಡ್ಡಿ ಅನುದಾನವನ್ನು ನೀಡಲಾಗುವುದು. ಆದರೆ, ಈ ಬಡ್ಡಿ ಅನುದಾನವು ಯಾವುದೇ ಸಂದರ್ಭದಲ್ಲಿ ಲಭ್ಯವಾಗಿಸಿರುವ ಪ್ರೋತ್ಸಾಹಧನದ "ಕ್ರೆಡಿಟ್ ಲಿಂಕ್ಡ್ ಬಂಡವಾಳ ಅನುದಾನ"ದಲ್ಲಿ ಅನುಮೋದಿತ ಬಂಡವಾಳವನ್ನು ಮೀರಕೂಡದು.

(ಎ) **ವಿದ್ಯುತ್ ಅನುದಾನ**

(i) **ಉದ್ದೇಶ:** ರಾಜ್ಯದ ಜವಳಿ ಮತ್ತು ಉಡುಪಿನ ವಲಯದ ಹೊಸ ಘಟಕಗಳನ್ನು ಸ್ಪರ್ಧಾತ್ಮಕಗೊಳಿಸಲು, ನೀತಿ ಅವಧಿಯಲ್ಲಿ ಘಟಕಗಳಿಗೆ ವಾಣಿಜ್ಯ ಉತ್ಪಾದನೆಯ ಪ್ರಾರಂಭದ ದಿನಾಂಕದಿಂದ 5 ವರ್ಷಗಳವರೆಗಿನ ವಿದ್ಯುತ್ ಅನುದಾನವನ್ನು ನೀಡಲಾಗುವುದು.

(ii) **ಅರ್ಹತೆ:** ನೀತಿ ಅವಧಿಯಲ್ಲಿ ರಾಜ್ಯದಲ್ಲಿ ಹೊಸ ಘಟಕಗಳನ್ನು ಸ್ಥಾಪಿಸುತ್ತಿರುವ ಉದ್ಯಮಿಗಳು ಈ ಬೆಂಬಲವನ್ನು ಕೇಳಲು ಮತ್ತು ಪಡೆಯಲು ಅರ್ಹರಾಗಿರುವರು.

(iii) **ನಿಧೀಕರಣ:** ನೀತಿ ಅವಧಿಯಲ್ಲಿ ಸ್ಥಾಪನೆಯಾಗುವ ಎಲ್ಲಾ ಘಟಕಗಳಿಗೆ ವಿದ್ಯುತ್ ಅನುದಾನವನ್ನು ನೀಡಲಾಗುವುದು.

(aa) ತಾಂತ್ರಿಕ ಜವಳಿ ಘಟಕಗಳನ್ನೊಳಗೊಂಡಂತೆ ಜವಳಿಯ ಮೌಲ್ಯ ಸರಣಿಯ ಎಲ್ಲಾ ಚಟುವಟಿಕೆಗಳಿಗೆ ಘಟಕಗಳು ಪಾವತಿಸಿದ ವಿದ್ಯುತ್ ವೆಚ್ಚವನ್ನು, ಪ್ರತಿ ಯೂನಿಟ್‌ಗೆ ರೂ.1.00 ರಂತೆ ಮರುಪಾವತಿ ಮಾಡಲಾಗುವುದು.

(bb) ವಿದ್ಯುತ್ ಮಗ್ಗದ ಘಟಕಗಳ ಸಂದರ್ಭದಲ್ಲಿ, ವಿದ್ಯುತ್ ಸಂಪರ್ಕವು 20 ಅಶ್ವ ಶಕ್ತಿಗಿಂತ ಹೆಚ್ಚಾಗಿರತಕ್ಕದ್ದು ಮತ್ತು ಟಿ.ಯು.ಎಫ್.ಎಸ್ ಅನುಸರಣೀಯ ಶಟಲ್ ರಹಿತ ಮಗ್ಗಗಳ ಅನುಸ್ಥಾಪನೆಯಾಗಿರುವ ಘಟಕಗಳಿಗೆ ಅವು ಪಾವತಿಸಿದ ವಿದ್ಯುತ್ ವೆಚ್ಚವನ್ನು ಪ್ರತಿ ಯೂನಿಟ್‌ಗೆ ರೂ.1.00ರಂತೆ ಮರುಪಾವತಿ ಮಾಡಲಾಗುವುದು.

(cc) ಗ್ರೀನ್‌ಫೀಲ್ಡ್ ಜವಳಿ ಉದ್ಯಾನಗಳು, ಬ್ರೌನ್‌ಫೀಲ್ಡ್ ಸಮೂಹ ಅಭಿವೃದ್ಧಿ ಮತ್ತು ಹಿಂದುಳಿದ ಪ್ರದೇಶಗಳ ನಿರ್ದಿಷ್ಟ ಜವಳಿ ವಲಯದಲ್ಲಿ ಇ.ಟಿ.ಪಿ ಸೌಲಭ್ಯಕ್ಕೆ ಪಾವತಿಸಿದ ವಿದ್ಯುತ್ ವೆಚ್ಚವನ್ನು ಪ್ರತಿ ಯೂನಿಟ್‌ಗೆ ರೂ.1.00 ರಂತೆ ಮರುಪಾವತಿ ಮಾಡಲಾಗುವುದು.

(ಏ) **ಸಾಮಾನ್ಯ ತ್ಯಾಜ್ಯಜಲದ ಉಪಚಾರ ಸ್ಥಾವರ (ಕಾಮನ್ ಎಫ್ಲೂಎಂಟ್ ಟ್ರೀಟ್ಮೆಂಟ್ ಪ್ಲಾಂಟ್) ಮತ್ತು ಹಾನಿಕಾರಕ ತ್ಯಾಜ್ಯ ವಿಲೇವಾರಿ ಸೌಲಭ್ಯಗಳು**

(i) **ಉದ್ದೇಶ:**

(aa) ರಾಜ್ಯದ ಜವಳಿ ಮತ್ತು ಉಡುಪಿನ ಘಟಕಗಳನ್ನು ಪರಿಸರೀಯ ರೂಢಿಗಳ ಅನುಸರಣೆಯಲ್ಲಿರಿಸಲು ಮತ್ತು ಈ ಮೂಲಕ ಅನುವರ್ತನೆಗಳನ್ನು ಪೂರೈಸಲು ಮತ್ತು ವೆಚ್ಚವನ್ನು ಕಡಿಮೆಗೊಳಿಸುವ ಸಲುವಾಗಿ ಸಾಮಾನ್ಯ ತ್ಯಾಜ್ಯಜಲದ ಉಪಚಾರ ಸ್ಥಾವರಗಳು/ ಹಾನಿಕಾರಕ ತ್ಯಾಜ್ಯ ವಿಲೇವಾರಿ ಸೌಲಭ್ಯಗಳ ಸ್ಥಾಪನೆಗಾಗಿ ಒಂದು ಬಾರಿಯ ಅನುದಾನವನ್ನು ಒದಗಿಸಲು ಪ್ರಸ್ತಾವನೆ ಇರಿಸಲಾಗಿದೆ.

(bb) ಸೌಲಭ್ಯಗಳ ರಚನೆಗೆ ಕಾರಣವಾದ ನಿರ್ದಿಷ್ಟ ಅಗತ್ಯಗಳ ಅನುಸಾರ ಅವುಗಳನ್ನು ರಚಿಸಲಾಗಿದೆ ಮತ್ತು ಕಾರ್ಯಾಚರಣೆ ನಡೆಯುತ್ತಿರುವುದಾಗಿ ಖಚಿತಪಡಿಸಲು, ಅಗತ್ಯ ಸಾಮರ್ಥ್ಯವನ್ನು ಹೊಂದಿರುವ ಸಂಘಟನೆಗಳು ಅಂಥ ಸೌಲಭ್ಯಗಳಲ್ಲಿ ಪಾಲ್ಗೊಳ್ಳುವುದಾಗಿ / ಅಭಿವೃದ್ಧಿಗೊಳಿಸುವುದಾಗಿ ಪ್ರಸ್ತಾಪಕರು ಖಚಿತಪಡಿಸಬೇಕಾಗುವುದು. ಸೌಲಭ್ಯಗಳಿಗೆ ವಿಶೇಷ ಸಾಮರ್ಥ್ಯದ ಅಗತ್ಯವಿರುವುದು. ಯೋಜನೆಯ ಅನುಷ್ಠಾನ, ಕಾರ್ಯಾಚರಣೆ ಮತ್ತು ನಿರ್ವಹಣೆಗಾಗಿ ಇಂತಹ ಚಟುವಟಿಕೆಗಳಲ್ಲಿ ತೊಡಗಿಕೊಂಡಿರುವ ಸಂಸ್ಥೆಗಳನ್ನು ಗುರುತು/ ಆಯ್ಕೆ ಮಾಡಬೇಕಾಗುವುದು.

(ii) **ಅರ್ಹತೆ:**

(aa) ಗುರುತುಪಡಿಸಿದ ಸ್ಥಳಗಳಲ್ಲಿ, ಹಿಂದುಳಿದ ಪ್ರದೇಶಗಳ ಯಾವುದೇ ಒಂದು ಪ್ರದೇಶದಲ್ಲಿ ಗ್ರೀನ್‌ಫಿಲ್ಡ್ / ಬ್ರೌನ್‌ಫೀಲ್ಡ್ ಅಥವಾ ಜವಳಿ ಉದ್ಯಾನಗಳನ್ನು ಅಭಿವೃದ್ಧಿ ಪಡಿಸುವ ಉದ್ದೇಶಕ್ಕಾಗಿ ಕನಿಷ್ಠ 5 ಮಂದಿ ಉದ್ಯಮಿಗಳ ತಂಡವನ್ನು ಹೊಂದಿರುವ ಬಳಕೆದಾರ ಉದ್ಯಮವು ಸ್ಥಾಪಿಸಿದ ಎಸ್.ಪಿ.ವಿ.ಯು ಬೆಂಬಲ ಸಹಾಯಧನಕ್ಕೆ ಅರ್ಹವಾಗುವುದು. ಎಸ್.ಪಿ.ವಿ.ಯು ಗ್ರೀನ್‌ಫಿಲ್ಡ್ ಜವಳಿ ಉದ್ಯಾನ / ಬ್ರೌನ್‌ಫೀಲ್ಡ್ ಸೌಲಭ್ಯಗಳು ಅಥವಾ ಹಿಂದುಳಿದ ಪ್ರದೇಶಗಳಲ್ಲಿ ವಲಯಕ್ಕೆ ನಿರ್ದಿಷ್ಟವಾದ ಜವಳಿ ಉದ್ಯಾನದ ಅಭಿವೃದ್ಧಿಯಾಗಬಹುದು.

(bb) ಅಂಥಹ ಸೌಲಭ್ಯಗಳ ಪ್ರಯೋಜನವನ್ನು ಪಡೆಯಬಯಸುವ ಎಸ್.ಪಿ.ವಿ. ಗಳು ಅಂಥಹ ಸೌಲಭ್ಯವನ್ನು ಅಭಿವೃದ್ಧಿ ಪಡಿಸಲು ಮತ್ತು ನಿರ್ವಹಿಸಲು ಅಗತ್ಯ ಸಾಮರ್ಥ್ಯವನ್ನು ಹೊಂದಿರುವ ಸಂಸ್ಥೆಗಳನ್ನು ಗುರುತಿಸಿ ನೇಮಿಸುವ ಮೂಲಕ ಬಿ.ಓ.ಟಿ ಮಾದರಿಯ ಅನುಸಾರ ಯೋಜನೆಗಳನ್ನು ಅಭಿವೃದ್ಧಿಪಡಿಸುವುದು.

(cc) ಯೋಜನೆಯ ಅವಶ್ಯಕತೆಗಳ ಪ್ರಮಾಣ ಮತ್ತು ಗಾತ್ರ ಸಾಕಷ್ಟು ದೊಡ್ಡದಾಗಿದ್ದಲ್ಲಿ, ಕರ್ನಾಟಕ ಸರ್ಕಾರವು ಕೈಮಗ್ಗ ಮತ್ತು ಜವಳಿ ಇಲಾಖೆಯ ಮುಖಾಂತರ ಇಂಥಹ ಸೌಲಭ್ಯವನ್ನು ಬಿ.ಓ.ಟಿ ಮಾದರಿಯ ಅನಸಾರ ನಡೆಸಬಹುದು.

(iii) **ಯೋಜನೆಯ ಅಂಗಗಳು:** ಬೆಂಬಲ ಸಹಾಯಧನದ ಉದ್ದೇಶಕ್ಕಾಗಿ ಯೋಜನೆಯ ವೆಚ್ಚವು ಈ ಕೆಳಗಿನ ಅಂಗಗಳನ್ನು ಒಳಗೊಳ್ಳುವುದು;

(aa) ರಸ್ತೆಗಳು, ನೀರು ಸರಬರಾಜು, ವಿದ್ಯುತ್ ಇತ್ಯಾದಿಯಂಥ ಮೂಲಭೂತ ಸೌಕರ್ಯಗಳು (ಭೂಮಿ ಮತ್ತು ಭೂ ಅಭಿವೃದ್ಧಿ ವೆಚ್ಚಗಳನ್ನು ಹೊರತುಪಡಿಸಿ)

(bb) ಕಟ್ಟಡ

(cc) ಸ್ಥಾವರ ಮತ್ತು ಯಂತ್ರೋಪಕರಣ

(iv) **ನಿಧೀಕರಣ:** ಸೌಲಭ್ಯಗಳನ್ನು ಸ್ಥಾಪಿಸಲು, ಒಂದುಬಾರಿಯ ಬೆಂಬಲ ಸಹಾಯಧನವನ್ನು ನಾಲ್ಕು ಕಂತುಗಳಲ್ಲಿ ಈ ಕೆಳಗಿನಂತೆ ಎಸ್.ಪಿ.ವಿ.ಗೆ ನೀಡಲಾಗುವುದು;

(aa) ಯೋಜನಾ ವೆಚ್ಚದ 50% ಅಥವಾ ರೂ.5.00 ಕೋಟಿ ಇವುಗಳಲ್ಲಿ ಯಾವುದು ಕಡಿಮೆಯೋ ಅದು.

(bb) ಕೈಮಗ್ಗ ಯೋಜನೆಗಳಾದಲ್ಲಿ, ಅನುದಾನವು ಯೋಜನೆಯ ವೆಚ್ಚದ 80% ಅಥವಾ ರೂ. 1.00 ಕೋಟಿ ಇವುಗಳಲ್ಲಿ ಯಾವುದು ಕಡಿಮೆಯೋ ಅದು.

(cc) ಯೋಜನೆಯು ಭಾರತ ಸರ್ಕಾರದ ಯಾವುದೇ ಯೋಜನೆಯ ಮೂಲಕ ನಿಧಿ ಪಡೆಯುತ್ತಿರುವ ಸಂದರ್ಭದಲ್ಲಿ, ಅನುದಾನವು ಯೋಜನೆಯ ವೆಚ್ಚದ 20% ಅಥವಾ ರೂ. 5.00 ಕೋಟಿ ಇವುಗಳಲ್ಲಿ ಯಾವುದು ಕಡಿಮೆಯೋ ಅದು.

(dd) ಪ್ರೋತ್ಸಾಹಧನದ ವಿತರಣೆಗಾಗಿ ಮೈಲಿಗಲ್ಲುಗಳನ್ನು ನೀತಿಯ ಕಾರ್ಯಾಚರಣೆ ಕೈಪಿಡಿಯಲ್ಲಿ ವಿವರಿಸಲಾಗುವುದು, ಇದು ಅನುಕ್ರಮದ ಅಭಿವೃದ್ಧಿ ಮೈಲಿಗಲ್ಲುಗಳನ್ನೂ ಸಹ ನಿಗದಿಪಡಿಸುವುದು.

(ಐ) **ಬೃಹತ್ ಯೋಜನೆ**

(i) **ಉದ್ದೇಶ:** ರಾಜ್ಯವು ಜಾಗತಿಕ ಹೂಡಿಕೆಯ ಗಮ್ಯಸ್ಥಾನವಾಗುವುದನ್ನು ಖಚಿತಪಡಿಸಲು ಹಲವು ಬೃಹತ್ ಯೋಜನೆಗಳ ಮುಖಾಂತರ ಅಭಿವೃದ್ಧಿಗೆ ದಾರಿ ಮಾಡುವುದು ಅವಶ್ಯಕವಾಗಿದೆ. ಕೈಮಗ್ಗ ಮತ್ತು ಜವಳಿ ಇಲಾಖೆಯು ಬೃಹತ್ ಯೋಜನೆಗಳನ್ನು ಪ್ರೋತ್ಸಾಹಿಸಲು ಮತ್ತು ಅವುಗಳಿಗೆ ಅನುಕೂಲ ಮಾಡಿಕೊಡಲು ಇಚ್ಛಿಸುತ್ತದೆ. ಇದರಿಂದಾಗಿ ಗುಣಕ ಪರಿಣಾಮವುಂಟಾಗುವುದು ಮತ್ತು ರಾಜ್ಯದಲ್ಲಿ ಉದ್ಯೋಗ ಉತ್ಪತ್ತಿ ಚಟುವಟಿಕೆ ಮತ್ತು ಅಂತರ್ಗತ ವಲಯ ಅಭಿವೃದ್ಧಿಗೆ ಪೂರಕವಾಗುವುದು.

(ii) **ಅರ್ಹತೆ:** ಒಂದೇ ಯೋಜನೆಯಲ್ಲಿ ಹೂಡಿಕೆಗಳ ಆಧಾರದ ಮೇಲೆ ಬೃಹತ್ ಯೋಜನೆಗಳನ್ನು ವಲಯ 1 ಮತ್ತು ವಲಯ 2 ರಲ್ಲಿ ಈ ಕೆಳಗಿನಂತೆ ವರ್ಗೀಕರಿಸಬಹುದಾಗಿದೆ:

(aa) ಉಡುಪು ತಯಾರಿಕಾ ಘಟಕಗಳನ್ನು ಹೊರತುಪಡಿಸಿ ಕೇವಲ ಸ್ಥಿರಾಸ್ತಿಗಳ ಸೃಜನೆಯಲ್ಲಿ ರೂ.100 ಕೋಟಿಗಳನ್ನು ಹೂಡುವ ಮತ್ತು ಕನಿಷ್ಠ 150 ನೇರ ಉದ್ಯೋಗಗಳನ್ನು ಒದಗಿಸುವ ಎಲ್ಲಾ ಜವಳಿ ಘಟಕಗಳು.

(bb) ಸ್ಥಿರಾಸ್ತಿಗಳ ಸೃಜನೆಯಲ್ಲಿ ರೂ.100 ಕೋಟಿಗಳ ಹೂಡುವ ಮತ್ತು ಕನಿಷ್ಠ 500 ನೇರ ಉದ್ಯೋಗಗಳನ್ನು ಒದಗಿಸುವ ಸಿದ್ಧಉಡುಪು ತಯಾರಿಕಾ ಘಟಕಗಳು.

(iii) **ನಿಧೀಕರಣ:** ಬೃಹತ್ ಯೋಜನೆಯನ್ನು ಅಭಿವೃದ್ಧಿಪಡಿಸಲು ಯೋಜನೆಯ ಪ್ರಸ್ತಾಪಕರಿಗೆ ನೀಡಲಿರುವ ವಿಶೇಷ ಪ್ರೋತ್ಸಾಹಕಗಳು ಈ ಕೆಳಗಿನಂತಿವೆ:

(aa) **ಬಂಡವಾಳ ಅನುದಾನ**

- ಬೃಹತ್ ಯೋಜನೆಗೆ ಅಭಿವೃದ್ಧಿಯಾಗಿರದ ಬೃಹತ್‌ಗಾತ್ರದ ಭೂಮಿಯ ಅಗತ್ಯವಿರುವುದು; ಯೋಜನೆಯ ಪ್ರಸ್ತಾಪಕರು ಘಟಕಕ್ಕೆ ಅಗತ್ಯವಿರುವ ಮೂಲಭೂತ ಸೌಕರ್ಯಗಳನ್ನು ನಿರ್ಮಿಸತಕ್ಕದ್ದು.
- ಸರ್ಕಾರವು ಸ್ಥಿರಾಸ್ತಿಗಳ ಮೇಲೆ 10% ಅಥವಾ ರೂ.10.00 ಕೋಟಿ ಇವುಗಳಲ್ಲಿ ಕಡಿಮೆಯಿರುವ ಮೊತ್ತದ ಬಂಡವಾಳ ಅನುದಾನವನ್ನು ನೀಡುವುದು.

(bb) **ರಾಜ್ಯ ಮಟ್ಟದ ತೆರಿಗೆಗಳು, ಸುಂಕಗಳು ಮತ್ತು ಶಾಸನಬದ್ಧ ಶುಲ್ಕಗಳ ಮರುಪಾವತಿ**

- ಬೃಹತ್ ಯೋಜನೆಗಳ ಪ್ರವರ್ತಕರಿಗೆ ಇತರ ಸಂಸ್ಥೆಗಳ ಮೂಲಕ ಸರಕುಗಳು ಮತ್ತು ಸೇವೆಗಳ ಪೂರೈಕೆಗೆ ಸಂಬಂಧಿಸಿದಂತೆ, ಬೃಹತ್ ಯೋಜನೆಯ ಪ್ರವರ್ತಕರಿಗೆ ಕರ್ನಾಟಕ ಸರ್ಕಾರವು, ಮಾರಾಟ ತೆರಿಗೆ, ವಹಿವಾಟು ತೆರಿಗೆ, ಕೆಲಸದ ಗುತ್ತಿಗೆ ತೆರಿಗೆ, ಸೆಸ್ಸು ಒಳಗೊಂಡಂತೆ ಎಲ್ಲಾ ರಾಜ್ಯ ಮತ್ತು ಸ್ಥಳೀಯ ತೆರಿಗೆಗಳು ಮತ್ತು ಪಾವತಿಗಳಿಂದ ರಿಯಾಯತಿ ನೀಡುವುದು.

- ಸರಕು ಪಟ್ಟಿ (ಇನ್ವಾಯ್ಸ್) ದಾಖಲೆಯ ಅನುಸಾರ ವಲಯ 1 ಮತ್ತು ವಲಯ 2ರಲ್ಲಿ ಬೃಹತ್ ಯೋಜನೆಗಾಗಿ ಉದ್ಯಮಿಗಳು ಮಾಡಿದ ವಾಸ್ತವಿಕ ಪಾವತಿಗಳ ಮೇಲೆ ಮರುಪಾವತಿ ಮಾಡಲಾಗುವುದು.

(cc) **ಉದ್ಯೋಗಿಗಳ ರಾಜ್ಯ ವಿಮೆ/ ಉದ್ಯೋಗಿಗಳ ಭವಿಷ್ಯ ನಿಧಿಯ ಮರುಪಾವತಿ**

- ಇ.ಎಸ್.ಐ ಮತ್ತು ಇ.ಪಿ.ಎಫ್ ಗಳೆಡೆಗೆ ಮಾಲೀಕರ ಕೊಡುಗೆಯ ಮೇರೆಗೆ ವ್ಯಯಿಸಿದ ಖರ್ಚಿನ ಮರುಪಾವತಿಯನ್ನು ಸರಕಾರವು ಪೂರ್ವನಿರ್ಧರಿತ ಸೂತ್ರಗಳ ಮೂಲಕ ಒದಗಿಸುವುದು.
- ಘಟಕಗಳ ವಲಯಗಳನ್ನು ಪರಿಗಣಿಸದಂತೆ, ಬೃಹತ್ ಯೋಜನೆಗಾಗಿ ಸರಕು ಪಟ್ಟಿ (ಇನ್ವಾಯ್ಸ್) ದಾಖಲೆಯ ಅನುಸಾರ ಉದ್ಯಮಿಗಳು ಮಾಡಿದ ವಾಸ್ತವಿಕ ಪಾವತಿಗಳ ಮೇಲೆ ಮರುಪಾವತಿ ಮಾಡಲಾಗುವುದು.
- ವಾಣಿಜ್ಯ ಉತ್ಪಾದನೆಯನ್ನು ಪ್ರಾರಂಭಿಸಿದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಈ ಬೆಂಬಲವು ಲಭ್ಯವಾಗಿರುವುದು.

(dd) **ಪ್ರವೇಶ ತೆರಿಗೆಯ ಮರುಪಾವತಿ**

- ಬೃಹತ್ ಯೋಜನೆಗಳಲ್ಲಿ ಸ್ಥಾವರ ಮತ್ತು ಯಂತ್ರೋಪಕರಣದ ಮೇಲೆ ಬೃಹತ್ ಹೂಡಿಕೆಯನ್ನು ಚಿತ್ರಿಸಲಾಗಿರುತ್ತದೆ, ಹಾಗಾಗಿ ಹೊರದೇಶಗಳಿಂದ ಇವುಗಳ ಆಮದು ಮಾಡಬಹುದಾಗಿದೆ. ಘಟಕದ ಅಗತ್ಯಕ್ಕನುಸಾರವಾಗಿ ಸ್ಥಾವರ ಮತ್ತು ಯಂತ್ರೋಪಕರಣದ ಪ್ರವೇಶ ತೆರಿಗೆಯ ಮೇಲೆ ಸರ್ಕಾರವು 100% ರಿಯಾಯತಿ ನೀಡುತ್ತದೆ.

(ee) **ಮುದ್ರಾಂಕ ಸುಂಕದ ಮರುಪಾವತಿ**

- ಮುದ್ರಾಂಕ ಸುಂಕವನ್ನು ಆಕರ್ಷಿಸುವ ಭೂಮಿ, ಸಾಲ, ದುಡಿಮೆ ಬಂಡವಾಳ ಮತ್ತು ಇತರ ಯೋಜನೆಗೆ ಸಂಬಂಧಿತ ಎಲ್ಲಾ ಕಾನೂನು ಸಂಬಂಧಿತ ದಾಖಲೆಗಳ ಮೇಲೆ ಮುದ್ರಾಂಕ ಸುಂಕವನ್ನು ವಲಯ 1 ಮತ್ತು ವಲಯ 2ಕ್ಕೆ ನಿಗದಿಪಡಿಸಿರುವ ಮಜಲುಗಳ ಅನುಸಾರ ಮರುಪಾವತಿ ಮಾಡಲಾಗುವುದು.

(ff) **ವಿದ್ಯುತ್ ಅನುದಾನ**

- ತಾಂತ್ರಿಕ ಜವಳಿ ಒಳಗೊಂಡಂತೆ ಜವಳಿ ಮೌಲ್ಯ ಸರಣಿಯ ಎಲ್ಲಾ ಚಟುವಟಿಕೆಗಳಿಗೆ ಘಟಕಗಳು ಪಾವತಿಸಿದ ವಿದ್ಯುತ್ ವೆಚ್ಚವನ್ನು ಪ್ರತಿ ಯೂನಿಟ್‌ಗೆ ರೂ.1.00 ರಂತೆ ಮರುಪಾವತಿ ಮಾಡಲಾಗುವುದು. ಉನ್ನತ ತಂತ್ರಜ್ಞಾನದ ವಿದ್ಯುತ್ ಮಗ್ಗದ ಘಟಕಗಳಾಗಿದ್ದಲ್ಲಿ ವಿದ್ಯುತ್ ಸಂಪರ್ಕವು 20 ಅಶ್ವಶಕ್ತಿಗಿಂತ ಹೆಚ್ಚಿನದಾಗಿರತಕ್ಕದ್ದು. ಪ್ರೋತ್ಸಾಹಧನವು ಯೋಜನೆಯಲ್ಲಿರುವ ಇ.ಟಿ.ಪಿ. ಸೌಲಭ್ಯಕ್ಕೂ ಸಹ ವಿಸ್ತೃತವಾಗುವುದು.
- ಬೃಹತ್ ಯೋಜನೆಗಳಾಗಿದ್ದಲ್ಲಿ, 24X7 ವಿದ್ಯುತ್ ಪೂರೈಕೆಗಾಗಿ ಆಕರ್ಷಕ ವಿದ್ಯುತ್ ಯೋಜನೆಯನ್ನು ಅಭಿವೃದ್ಧಿಪಡಿಸಲು ಪ್ರವರ್ತಕರು ಸ್ವತಂತ್ರರಾಗಿರುವರು. ವಿದ್ಯುತ್ ಯೋಜನೆಯ ವೆಚ್ಚವನ್ನು ವಿಸ್ತೃತ ಯೋಜನಾ ವರದಿಯಲ್ಲಿ ಯೋಜನೆಯ ವೆಚ್ಚದ ಭಾಗವಾಗಿ ಪರಿಗಣಿಸಲಾಗುವುದು.

(gg) ಮೇಲೆ ಸೂಚಿಸಿರುವ ಪ್ರೋತ್ಸಾಹಕಗಳ ಗುಂಪು ಯೋಜನೆಯ ವೆಚ್ಚದ 15% ಅಥವಾ ರೂ.50.00 ಕೋಟಿಗಳಲ್ಲಿ ಕಡಿಮೆಯಿರುವ ಮೊತ್ತವನ್ನು ಮೀರಕೂಡದು

(ಒ) **ಸಾಮರ್ಥ್ಯ ನಿರ್ಮಾಣಕ್ಕೆ ಬೆಂಬಲ**

ಜವಳಿ ಮತ್ತು ಉಡುಪು ವಲಯಕ್ಕಾಗಿ ದೃಢ ಸೌಕರ್ಯಗಳ ಅಭಿವೃದ್ಧಿಯ ಹೊರತಾಗಿ, ಮುಖ್ಯವಾಗಿ ಒಟ್ಟಾರೆ ಸಾಮರ್ಥ್ಯ ವರ್ಧನೆ ಉದ್ದೇಶಗಳಿಗಾಗಿ ಉದ್ಯಮಕ್ಕೆ ಮೃದು ಇನ್‌ಪುಟ್‌ಗಳನ್ನು ಒದಗಿಸುವ ಮೂಲ ಅಗತ್ಯವಿರುವುದು. ಪ್ರಮಾಣಾನುಗುಣ ಉಳಿತಾಯಗಳನ್ನು ಪಡೆಯಲು ಅಂಥ ಸಾಮರ್ಥ್ಯ ರಚನೆ ಉಪಕ್ರಮಗಳನ್ನು ಸಮಷ್ಟಿ ವ್ಯವಸ್ಥೆಯ ಆಧಾರದ ಮೇಲೆ ಒದಗಿಸುವ ಅಗತ್ಯವಿರುವುದು. ನೀತಿಯ ಅವಧಿಯಲ್ಲಿ ಬೆಂಬಲಿಸುವ ಸಾಮರ್ಥ್ಯ ನಿರ್ಮಾಣ ಉಪಕ್ರಮಗಳು ಈ ಕೆಳಗಿನಂತಿವೆ;

**(i) ಮಾರುಕಟ್ಟೆ ಅಭಿವೃದ್ಧಿ ಮತ್ತು ಬ್ರಾಂಡಿಂಗ್**

(aa) **ಉದ್ದೇಶ:** ಉದ್ಯಮಿಗಳು / ಘಟಕಗಳ ಗುಂಪುಗಳನ್ನು ಜಾಗತಿಕ ಮಾರುಕಟ್ಟೆಗಳು ಮತ್ತು ಅಭಿವೃದ್ಧಿಯಾಗುತ್ತಿರುವ ಸ್ವದೇಶೀಯ ಮಾರುಕಟ್ಟೆಗಳನ್ನು ಫಲದಾಯಕವಾಗಿ ತಲುಪಲು ಸಮರ್ಥಗೊಳಿಸುವುದು.

(bb) **ಅರ್ಹತೆ:** ಈ ಮೇಲಿನ ಪ್ರೋತ್ಸಾಹಧನವನ್ನು ಪಡೆಯಲು ಬೇಕಾದ ಅರ್ಹತೆಗಳು ಈ ಕೆಳಗಿನಂತಿವೆ;

- ರಾಜ್ಯ / ಉದ್ಯಮ ಸಂಘಟನೆಗಳಲ್ಲಿ ಘಟಕಗಳನ್ನು ಹೊಂದಿರುವ ಕನಿಷ್ಠ 5 ಉದ್ಯಮಿಗಳ ತಂಡ.
- ಕೇಂದ್ರ ಅಥವಾ ರಾಜ್ಯ ಸರಕಾರದ ನೆರವಿನೊಂದಿಗೆ ಜವಳಿ ಉದ್ಯಾನಗಳು / ನಿರ್ದಿಷ್ಟ ಜವಳಿ ವಲಯಗಳನ್ನು ಅಭಿವೃದ್ಧಿಗೊಳಿಸುತ್ತಿರುವ ಎಸ್.ಪಿ.ವಿ. ಗಳು / ಉದ್ಯಮ ಸಂಘಟನೆಗಳು.

(cc) **ಯೋಜನೆಯ ಅಂಗಗಳು:** ನಿಧಿ ಹೂಡಲ್ಪಡುವ ಯೋಜನೆಯ ಅಂಗಗಳು ಈ ಕೆಳಗಿನಂತಿವೆ;

- ಅಂತರಾಷ್ಟ್ರೀಯ ಪ್ರದರ್ಶನಗಳಲ್ಲಿ ಭಾಗವಹಿಸುವಿಕೆ
- ವಿದೇಶದಲ್ಲಿ ವ್ಯಾವಹಾರಿಕ ಪ್ರತಿನಿಧಿಗಳು ಮತ್ತು ಅಂತಸ್ಥ ರಾಯಭಾರಿಗಳು
- ವೆಬ್‌ಸೈಟ್‌ಗಳು / ಕೈಪಿಡಿ ಇತ್ಯಾದಿಗಳ ರಚನೆ
- ಮಾರುಕಟ್ಟೆ ಸಂಶೋಧನಾ ಅಧ್ಯಯನಗಳನ್ನು ಕೈಗೊಳ್ಳುವುದು
- ಅಂತರಾಷ್ಟ್ರೀಯ ಮಾರುಕಟ್ಟೆ ಅಭಿವೃದ್ಧಿ ಸಲಹೆಗಾರರೊಡನೆ ಸಂಬಂಧ ಕಲ್ಪಿಸುವುದು
- ಬ್ರಾಂಡ್‌ಗಳ ರಚನೆ
- ಪ್ರಚಾರ
- ಇತರ ವ್ಯಾಪಾರ ಉಪಕ್ರಮಗಳು

(dd) **ನಿಧೀಕರಣ:** ಈ ಉಪಕ್ರಮಕ್ಕೆ ಯೋಜನೆಯ ವೆಚ್ಚದ 50% ಅಥವಾ ರೂ. 50 ಲಕ್ಷ ಇವುಗಳಲ್ಲಿ ಕಡಿಮೆಯಿರುವ ಮೊತ್ತದ ಬೆಂಬಲ ಧನವನ್ನು ನೀಡಲಾಗುವುದು, ಬಾಕಿ ಮೊತ್ತದ ಪೂರೈಕೆ / ವ್ಯವಸ್ಥೆಯನ್ನು ಉದ್ಯಮಿಗಳ / ಉದ್ಯಮ ಸಂಘಟನೆಗಳ ತಂಡವು ಮಾಡತಕ್ಕದ್ದು. ಮರುಪಾವತಿ ಆಧಾರದ ಮೇಲೆ ನೆರವು ನೀಡಲಾಗುವುದು.

**(ii) ವಿನ್ಯಾಸ ಅಭಿವೃದ್ಧಿ ಮತ್ತು ಉತ್ಪನ್ನ ವೈವಿಧ್ಯೀಕರಣ:**

(aa) **ಉದ್ದೇಶ:** ವಿನ್ಯಾಸ ಅಭಿವೃದ್ಧಿಯ ಮೂಲಕ ಹೊಸ ಉತ್ಪನ್ನಗಳನ್ನು ರಚಿಸಲು ಕೈಮಗ್ಗ ಉದ್ಯಮಿಗಳು ಅಥವಾ ಘಟಕಗಳನ್ನು ಸಮರ್ಥಗೊಳಿಸುವುದು.

(bb) **ಅರ್ಹತೆ:** ಈ ಮೇಲಿನ ಪ್ರೋತ್ಸಾಹಧನವನ್ನು ಪಡೆಯಲು ಬೇಕಾದ ಅರ್ಹತೆಗಳು ಈ ಕೆಳಗಿನಂತಿವೆ;

- ರಾಜ್ಯ / ಉದ್ಯಮ ಸಂಘಟನೆಗಳು / ಸಹಕಾರಿ ಸಂಘಗಳಲ್ಲಿ ಘಟಕಗಳನ್ನು ಹೊಂದಿರುವ ಕನಿಷ್ಠ 5 ಕೈಮಗ್ಗ ಉದ್ಯಮಿಗಳ ತಂಡ.
- ಕೇಂದ್ರ ಅಥವಾ ರಾಜ್ಯ ಸರಕಾರದ ನೆರವಿನೊಂದಿಗೆ ಜವಳಿ ಉದ್ಯಾನಗಳು (ಕೈಮಗ್ಗಗಳು) / ನಿರ್ದಿಷ್ಟ ಜವಳಿ ವಲಯಗಳನ್ನು ಅಭಿವೃದ್ಧಿಗೊಳಿಸುತ್ತಿರುವ ಎಸ್.ಪಿ.ವಿ.ಗಳು.

(cc) **ಯೋಜನೆಯ ಅಂಗಗಳು:** ನಿಧಿ ಹೂಡಲ್ಪಡುವ ಯೋಜನೆಯ ಅಂಗಗಳು ಈ ಕೆಳಗಿನಂತಿವೆ;

- ವಿನ್ಯಾಸ ಮತ್ತು ಉತ್ಪನ್ನದ ಅಭಿವೃದ್ಧಿಯಲ್ಲಿ ತೊಡಗಿಕೊಂಡ ವಿನ್ಯಾಸಗಾರರ ವೆಚ್ಚ.
- ಕಚ್ಚಾ ವಸ್ತುಗಳು ಅನ್ವಯಿಸುವಲ್ಲಿ ವಿಶೇಷ ಯಂತ್ರ ಇತ್ಯಾದಿಗಳ ವೆಚ್ಚ.
- ಪರೀಕ್ಷಣೆ, ಪ್ರಮಾಣೀಕರಣ ವೆಚ್ಚಗಳು ಇತ್ಯಾದಿ.

(ee) **ನಿಧೀಕರಣ:** ಈ ಉಪಕ್ರಮಕ್ಕೆ ಯೋಜನೆಯ ವೆಚ್ಚದ 50% ಅಥವಾ ರೂ. 25 ಲಕ್ಷ ಇವುಗಳಲ್ಲಿ ಕಡಿಮೆಯಿರುವ ಮೊತ್ತದ ಬೆಂಬಲ ಧನವನ್ನು ನೀಡಲಾಗುವುದು. ಬಾಕಿ ಮೊತ್ತದ ಪೂರೈಕೆ / ವ್ಯವಸ್ಥೆಯನ್ನು ಉದ್ಯಮಿಗಳ / ಉದ್ಯಮ ಸಂಘಟನೆಗಳ / ಸಹಕಾರಿ ಸಂಘಗಳ ತಂಡವು ಮಾಡತಕ್ಕದ್ದು. ಮರುಪಾವತಿ ಆಧಾರದ ಮೇಲೆ ನೆರವು ನೀಡಲಾಗುವುದು.

**(iii) ಮಾನದಂಡಗಳು ಮತ್ತು ಅನುವರ್ತನೆಗಳು:**

(aa) **ಉದ್ದೇಶ:** ಮಾನದಂಡಗಳನ್ನು ಅಳವಡಿಸಲು ಉದ್ಯಮವನ್ನು ಸಮರ್ಥಗೊಳಿಸುವುದು ಮತ್ತು ಅಂತೆಯೇ ವಿವಿಧ ಅಂತರಾಷ್ಟ್ರೀಯ ವ್ಯಾಪಾರ ಅಗತ್ಯಗಳ ಆಜ್ಞಾನುವರ್ತನೆ ಮಾಡುವುದು.

(bb) **ಅರ್ಹತೆ:** ಈ ಕೆಳಗೆ ಸೂಚಿಸಿರುವಂಥ ಯಾವುದೇ ಅಂತರಾಷ್ಟ್ರೀಯವಾಗಿ ಗುರುತಿಸಲ್ಪಟ್ಟ / ಅಂಗೀಕೃತ ಮಾನದಂಡಗಳ ಪ್ರಕಾರ ದೃಢೀಕರಣ / ಮಾನ್ಯತೆ ಪಡೆಯುವ ಯಾವುದೇ ಘಟಕ;

- ಬ್ಯೂರೋ ಆಫ್ ಇಂಡಿಯನ್ ಸ್ಟಾಂಡರ್ಡ್ಸ್
- ಐ.ಎಸ್.ಓ–9000 ಕ್ವಾಲಿಟಿ ಮ್ಯಾನೇಜ್ಮೆಂಟ್ ಸಿಸ್ಟಮ್
- ಐ.ಎಸ್.ಓ–14000 ಎನ್ವಿರಾನಮೆಂಟಲ್ ಮ್ಯಾನೇಜ್ಮೆಂಟ್ ಸಿಸ್ಟಮ್
- ಐ.ಎಸ್.ಓ–18000 ಆಕ್ಯುಪೇಶನಲ್ ಹೆಲ್ತ್ ಆ್ಯಂಡ್ ಸೇಫ್ಟಿ ಸ್ಟಾಂಡರ್ಡ್ಸ್
- ಸೋಷಿಯಲ್ ಅಕೌಂಟೆಬಿಲಿಟಿ ಸ್ಟಾಂಡರ್ಡ್ಸ್
- ಅಂತರಾಷ್ಟ್ರೀಯ ಮನ್ನಣೆ ಪಡೆದ ಈಕೋ–ಲೇಬಲ್‌ಗಳು OKE-TEX 100 ಇತ್ಯಾದಿ
- ಯು.ಎನ್ ಎನ್ವಿರಾನಮೆಂಟಲ್ ಪ್ರೋಗ್ರಾಮ್ ಸರ್ಟಿಫಿಕೇಶನ್ (ಸಾಮಾಜಿಕ ಜವಾಬ್ದಾರಿ ಮತ್ತು ಸುಸ್ಥಿರ ವ್ಯಾಪಾರ ರೂಢಿಗಳನ್ನು ಪ್ರೋತ್ಸಾಹಿಸುವ ಯು.ಎನ್ ಮುಂದಾಳತ್ವದ ಉಪಕ್ರಮ) ಮತ್ತು ಯು.ಎನ್ ಇಕಾನಮಿಕ್ ಆ್ಯಂಡ್ ಸೋಷಿಯಲ್ ಕಮಿಶನ್ ಫಾರ್ ಏಷ್ಯಾ ಆ್ಯಂಡ್ ದಿ ಪೆಸಿಫಿಕ್ (UNESCAP)
- ಉತ್ತಮ ಮಾರುಕಟ್ಟೆ ಸ್ಥಾನೀಕರಣಕ್ಕೆ (ಮಾರ್ಕೆಟ್ ಪೊಸಿಶನಿಂಗ್) ಅನುವು ಮಾಡುವ ಅಂತರಾಷ್ಟ್ರೀಯವಾಗಿ ಮಾನ್ಯತೆ ಪಡೆದ ಇತರ ಯಾವುದೇ ದೃಢೀಕರಣ

(ff) **ನಿಧೀಕರಣ:** ಪ್ರತ್ಯೇಕ ಘಟಕಕ್ಕೆ ವೆಚ್ಚದ 50% ಅಥವಾ ರೂ.5 ಲಕ್ಷ ಇವುಗಳಲ್ಲಿ ಕಡಿಮೆಯಿರುವ ಮೊತ್ತದವರೆಗಿನ ಬೆಂಬಲಧನವನ್ನು ನೀಡಲಾಗುವುದು. ಬಾಕಿ ಮೊತ್ತದ ಪೂರೈಕೆ / ವ್ಯವಸ್ಥೆಯನ್ನು ಫಲಾನುಭವಿ ಘಟಕವು ಮಾಡತಕ್ಕದ್ದು. ಮರುಪಾವತಿ ಆಧಾರದ ಮೇಲೆ ನೆರವು ನೀಡಲಾಗುವುದು.

**(ಓ) ಹಾಲಿ ಇರುವ ಘಟಕಗಳ ಸಂಪನ್ಮೂಲ ಸಂರಕ್ಷಣೆ ಮತ್ತು ಪರಿಸರೀಯ ಅನುಸರಣೆಗಾಗಿ ನೆರವು**

(i) **ಉದ್ದೇಶ:** ರಾಜ್ಯದಲ್ಲಿ ಹಾಲಿ ಇರುವವಾಗಿ ಇರುವ ಜವಳಿ ಮತ್ತು ಉಡುಪಿನ ಘಟಕಗಳನ್ನು ಬದಲಾಗುತ್ತಿರುವ ಪರಿಸರೀಯ ರೂಢಿಗಳಿಗೆ ಅನುವರ್ತಿಯಾಗಿಸಲು ಸಂಪನ್ಮೂಲ ಸಂರಕ್ಷಣೆ ಮತ್ತು ಪರಿಸರೀಯ ಅನುಸರಣೆಗಾಗಿ ನೆರವು ನೀಡಬೇಕೆಂದು ಪ್ರಸ್ತಾಪಿಸಲಾಗಿದೆ.

(ii) **ಅರ್ಹತೆ:**

(aa) ಕನಿಷ್ಠ ಮೂರು ವರ್ಷಗಳು ಅಥವಾ ಹೆಚ್ಚಿನ ಅವಧಿಗೆ ಕಾರ್ಯನಿರ್ವಹಿಸುತ್ತಿರುವ ಹಾಲಿ ಇರುವ ಘಟಕಗಳು ಈ ಸಹಾಯಧನಕ್ಕೆ ಅರ್ಹವಾಗುವವು.

(bb) ಯೋಜನೆಯ ಕಾರ್ಯಾಚರಣೆಯ ಅವಧಿಯ ಎರಡು ವರ್ಷಗಳಿಗೊಮ್ಮೆ ಸಹಾಯಧನವನ್ನು ಪಡೆಯಲು ಸಂಸ್ಥೆಯು ಅರ್ಹವಾಗಿರುವುದು.

(iii) **ನಿಧೀಕರಣ:** ಶಕ್ತಿಯ ಆಡಿಟ್/ ನೀರಿನ ಆಡಿಟ್/ ಪರಿಸರೀಯ ಅನುವರ್ತನೆಯ ವೆಚ್ಚದ 50% ಅಥವಾ ಗರಿಷ್ಠ ರೂ.50,000 ದಲ್ಲಿ ಕಡಿಮೆಯಿರುವ ಮೊತ್ತದವರೆಗಿನ ಮರುಪಾವತಿಯು ಪ್ರತಿ ಪ್ರಕರಣದಲ್ಲಿ ಪ್ರತ್ಯೇಕವಾಗಿ ಅನ್ವಯಿಸುತ್ತದೆ.

**(ಔ) ಸಂಯೋಜಿತ ಜವಳಿ ಘಟಕಗಳು:**

ಒಬ್ಬ ಉದ್ಯಮಿಯಿಂದ ಒಂದೇ ಸ್ಥಳದಲ್ಲಿ ಜವಳಿ ಮೌಲ್ಯ ಸರಣಿಯ ಒಂದಕ್ಕಿಂತ ಹೆಚ್ಚಿನ ಚಟುವಟಿಕೆಗಳಿಗೆ ಆಧಾರ ನೀಡುತ್ತಿರುವ ಜವಳಿ ಮತ್ತು ಉಡುಪಿನ ಘಟಕಗಳನ್ನು ಸಂಯೋಜಿತ ಜವಳಿ ಘಟಕಗಳೆಂದು ಕರೆಯಬಹುದಾಗಿದೆ.

**(ಅಂ) ಇತರ ಯೋಜನೆಗಳಡಿಯಲ್ಲಿ ಬೆಂಬಲದ ಹೊಂದಿಸಿಕೊಳ್ಳುವಿಕೆ (ಡೋವ್‌ಟೈಲಿಂಗ್):**

ಭಾರತ ಸರ್ಕಾರದ ಜವಳಿ ಸಚಿವಾಲಯದ ಟಿ.ಯು.ಎಫ್.ಎಸ್. ನಂಥ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ವಿವಿಧ ಯೋಜನೆಗಳ ಪ್ರಕಾರ ಲಭ್ಯವಿರುವ ನೆರವನ್ನು ಉದ್ಯಮಿಗಳು / ಕೈಗಾರಿಕಾ ಸಂಘಟನೆಗಳು / ಎಸ್.ಪಿ.ವಿ.ಗಳು / ಘಟಕಗಳು ಈ ನೀತಿಯಲ್ಲಿ ಲಭ್ಯವಿರುವ ಸಹಾಯದೊಂದಿಗೆ ಹೊಂದಿಸಿಕೊಳ್ಳಬಹುದು. ಆದರೆ ಅಂಥ ಹೊಂದಿಸಿಕೊಳ್ಳುವಿಕೆಯ ಸಂದರ್ಭದಲ್ಲಿ, ಉದ್ಯಮದ ಕೊಡುಗೆಯು ಪ್ರತಿ ಯೋಜನೆಯ ವೆಚ್ಚದ 15% ಕ್ಕಿಂತ ಕಡಿಮೆಯಾಗಕೂಡದು.

ಈ ನೀತಿಯ ಅನುಸಾರ ಅನುಮೋದಿತ ಯೋಜನೆಗಳು ರಾಜ್ಯದ ಕೈಗಾರಿಕಾ ನೀತಿಯ ಅನುಸಾರ ಪ್ರೋತ್ಸಾಹಧನ ಮತ್ತು ರಿಯಾಯತಿಗಳನ್ನು ಪಡೆಯಲು ಅರ್ಹರಾಗಿರುವುದಿಲ್ಲ.

**(18) ಮಾನವ ಸಂಪನ್ಮೂಲ ವಿಭಾಗ ಮತ್ತು ಕೌಶಲ್ಯ ಉನ್ನತೀಕರಣ:**

ಕುಶಲ ಕಾರ್ಮಿಕರ ಲಭ್ಯತೆ ಮತ್ತು ಗುಣಮಟ್ಟವು ಜಾಗತಿಕವಾಗಿ ಸ್ಪರ್ಧಾತ್ಮಕವಾದ ಜವಳಿ ಮತ್ತು ಉಡುಪಿನ ಉದ್ಯಮಕ್ಕೆ ಪೂರ್ವಾಪೇಕ್ಷೆಗಳು. ಹಾಗಾಗಿ ಜವಳಿ ಉದ್ಯಮದ ವಿವಿಧ ಉಪ–ವಲಯಗಳಿಗಾಗಿ ಈ ನೀತಿಯು ಅವಶ್ಯಕತೆ–ಆಧಾರಿತ ಕೌಶಲ್ಯಗಳ ಅಭಿವೃದ್ಧಿಗೆ ಸಾಕಷ್ಟು ಆದ್ಯತೆ ಮತ್ತು ಬಲವನ್ನು ಒದಗಿಸುತ್ತದೆ. ನೀತಿಯ ಅವಧಿಯಲ್ಲಿ 5 ಲಕ್ಷ ಉದ್ಯೋಗಗಳನ್ನು ಸೃಷ್ಟಿಸುವುದು ಮತ್ತು ನಿರುದ್ಯೋಗಿ ಯುವಕರಿಗೆ ತರಬೇತಿ ನೀಡುವ ಗುರಿ ಹೊಂದಲಾಗಿದೆ.

(ಅ) ಸಂಸ್ಥೆಯಲ್ಲಿ ಜವಳಿಯ ಮೂಲಭೂತ ಸೌಕರ್ಯಗಳ ಉನ್ನತೀಕರಣ

ಜವಳಿ ಮೌಲ್ಯ ಸರಣಿಯಲ್ಲಿ ಶೈಕ್ಷಣಿಕ / ಕೌಶಲ ಅಭಿವೃದ್ಧಿಯಲ್ಲಿ ತೊಡಗಿಕೊಂಡಿರುವ ಹೆಸರಾಂತ ಸಂಸ್ಥೆಗಳಿಗೆ ತಮ್ಮ ಆವರಣದಲ್ಲಿ ತರಬೇತಿ ಸೌಲಭ್ಯಗಳನ್ನು ಉನ್ನತೀಕರಿಸಲು ಹಣಕಾಸಿನ ನೆರವನ್ನು ನೀಡಲಾಗುವುದು. ಜವಳಿ ಮೂಲಭೂತ ಸೌಕರ್ಯಗಳ ಉನ್ನತೀಕರಣವನ್ನು ಸಮರ್ಥಿಸುವ ಅನುಮೋದಿತ ಡಿ.ಪಿ.ಆರ್ ಆಧಾರದ ಮೇಲೆ ಸಂಸ್ಥೆಗಳಿಗೆ ರೂ.1 ಕೋಟಿಯವರೆಗಿನ ಹಣಕಾಸಿನ ಬೆಂಬಲವನ್ನು ನೀಡಲಾಗುವುದು. ಕರ್ನಾಟಕ ಜವಳಿ ನೀತಿ 2013–2018 ರ ಅವಧಿಯಲ್ಲಿ ಜವಳಿ ಮೂಲಭೂತ ಸೌಕರ್ಯಗಳ ಉನ್ನತೀಕರಣಕ್ಕಾಗಿ ಮೂರು ಸಂಸ್ಥೆಗಳಿಗೆ ಬೆಂಬಲ ಒದಗಿಸಲಾಗುವುದು.

(ಆ) ಹಾಲಿ ಇರುವ ವಿದ್ಯಾ ಸಂಸ್ಥೆಗಳು / ಕೌಶಲ್ಯ ಅಭಿವೃದ್ಧಿ ಕೇಂದ್ರಗಳ ಪ್ರಬಲಗೊಳಿಸುವಿಕೆ

ಭಾರತ ಸರ್ಕಾರದ ಎನ್.ಎಸ್.ಡಿ.ಸಿ ಮತ್ತು ಎಮ್.ಓ.ಆರ್.ಡಿ, ಎಮ್.ಓ.ಟಿ ಇತ್ಯಾದಿಯಂಥ ಇತರ ಸಚಿವಾಲಯಗಳ ಮೂಲಕ ಕೈಗೊಳ್ಳುವ ತರಬೇತಿ ಉಪಕ್ರಮಗಳ ನಡುವೆ ಅಭಿಗಮನ ಹೊಂದುವ ಸಲುವಾಗಿ ಮೂಲಭೂತ ಸೌಕರ್ಯಗಳ ರಚನೆಗಾಗಿ ಬೆಂಬಲ ಧನದ ಒದಗಿಸುವಿಕೆಯನ್ನು ಪ್ರೋತ್ಸಾಹಿಸಲಾಗುವುದಿಲ್ಲ. ಇಲಾಖೆಯಿಂದ ಒದಗಿಸುವ ನಿಧೀಕರಣದಲ್ಲಿ ಅನುದಾನವು ತರಬೇತಿ ವೆಚ್ಚದೆಡೆಗೆ ಮಾತ್ರ ಬೆಂಬಲವನ್ನು ಒಳಗೊಳ್ಳುವುದು.

(i) ತರಬೇತಿಯ ಸಂದರ್ಭದಲ್ಲಿ ಪ್ರವರ್ತಕರು ಅಗತ್ಯ ಮೂಲಭೂತ ಸೌಕರ್ಯಗಳು ಮತ್ತು ತರಬೇತಿ ನೀಡುವ ಮತ್ತು ಫಲಾನುಭವಿಗಳಿಗೆ ಜವಳಿ ಮತ್ತು ಸಿದ್ಧ ಉಡುಪಿನ ವಲಯದಲ್ಲಿ ಉದ್ಯೋಗವನ್ನು ಕಲ್ಪಿಸುವ ಸಾಮರ್ಥ್ಯವನ್ನು ಹೊಂದಿದಲ್ಲಿ ಅವರಿಗೆ ತರಬೇತಿ ವೆಚ್ಚದೆಡೆಗೆ ಬೆಂಬಲ ಧನ ನೀಡಲಾಗುವುದು. ಕೈಮಗ್ಗ ಮತ್ತು ಜವಳಿ ಇಲಾಖೆಯ ಮೂಲಕ ಪಡೆದ ನಿಧಿಯಿಂದ ಮೂಲಭೂತ ಸೌಕರ್ಯವನ್ನು ರಚಿಸಿದ್ದಲ್ಲಿ ತರಬೇತಿ ವೆಚ್ಚದೆಡೆಗೆ ಫಲಾನುಭವಿಯೊಬ್ಬರಿಗೆ ರೂ.6000 ದಂತೆ ಬೆಂಬಲ ಧನವನ್ನು ನೀಡಲಾಗುವುದು.

(ಇ) ಪ್ರಸಕ್ತ ಯೋಜನೆಯ ಅನುಷ್ಠಾನ ಸಂಸ್ಥೆಗಳು (ಪ್ರಾಜೆಕ್ಟ್ ಇಂಪ್ಲಿಮೆಂಟೇಶನ್ ಏಜನ್ಸೀಸ್ / ಪಿ.ಐ.ಏ.ಗಳು) / ಇನ್ಸ್ಟಿಟ್ಯೂಟ್‌ಗಳಿಗೆ ಬೆಂಬಲ

ತರಬೇತಿಯ ಸಂದರ್ಭದಲ್ಲಿ ಪ್ರವರ್ತಕರು ಅಗತ್ಯ ಮೂಲಭೂತ ಸೌಕರ್ಯಗಳು ಮತ್ತು ತರಬೇತಿ ನೀಡುವ ಮತ್ತು ಫಲಾನುಭವಿಗಳಿಗೆ ಜವಳಿ ಮತ್ತು ಸಿದ್ಧ ಉಡುಪಿನ ವಲಯದಲ್ಲಿ ಉದ್ಯೋಗವನ್ನು ಕಲ್ಪಿಸುವ ಸಾಮರ್ಥ್ಯವನ್ನು ಹೊಂದಿದಲ್ಲಿ ಅವರಿಗೆ ತರಬೇತಿ ವೆಚ್ಚದೆಡೆಗೆ ಬೆಂಬಲ ಧನವನ್ನೂ ಸಹ ನೀಡಲಾಗುವುದು. ಈ ಸಂದರ್ಭದಲ್ಲಿ ಫಲಾನುಭವಿಯೊಬ್ಬರಿಗೆ ರೂ.7500 ರಂತೆ ಬೆಂಬಲ ಧನವನ್ನು ನೀಡಲಾಗುವುದು.

(ಈ) ಹೊಸ ಯೋಜನೆಯ ಅನುಷ್ಠಾನ ಸಂಸ್ಥೆಗಳಿಗೆ ಬೆಂಬಲ

ತರಬೇತಿಯ ಸಂದರ್ಭದಲ್ಲಿ ಪ್ರವರ್ತಕರು ಅಗತ್ಯ ಮೂಲಭೂತ ಸೌಕರ್ಯಗಳು ಮತ್ತು ತರಬೇತಿ ನೀಡುವ ಮತ್ತು ಫಲಾನುಭವಿಗಳಿಗೆ ಜವಳಿ ಮತ್ತು ಸಿದ್ಧ ಉಡುಪಿನ ವಲಯದಲ್ಲಿ ಉದ್ಯೋಗವನ್ನು ಕಲ್ಪಿಸುವ ಸಾಮರ್ಥ್ಯವನ್ನು ಹೊಂದಿದಲ್ಲಿ ಸಮರ್ಥ ಹೂಡಿಕೆಯ ತನಿಖೆಗೆ ಒಳಪಟ್ಟಂತೆ ಅವರಿಗೆ ತರಬೇತಿ ವೆಚ್ಚದೆಡೆಗೆ ಬೆಂಬಲ ಧನವನ್ನೂ ಸಹ ನೀಡಲಾಗುವುದು. ಈ ಸಂದರ್ಭದಲ್ಲಿ ಫಲಾನುಭವಿಯೊಬ್ಬರಿಗೆ ರೂ.7500 ರಂತೆ ಬೆಂಬಲ ಧನವನ್ನು ನೀಡಲಾಗುವುದು.

(ಉ) ನಿಧೀಕರಣ ಮೈಲಿಗಲ್ಲುಗಳು

(i) ಕರ್ನಾಟಕ ಸರ್ಕಾರವು ತರಬೇತಿ ಕಾರ್ಯಕ್ರಮಗಳಿಗೆ ನೀಡುವ ಬೆಂಬಲ ಸಹಾಯಧನವು ಎರಡು ಮೈಲಿಗಲ್ಲುಗಳ ಆಧಾರದ ಮೇಲಿರುವುದು.

(ii) ತರಬೇತಿ ಕಾರ್ಯಕ್ರಮದ ಮುಕ್ತಾಯ ಮೊದಲ ಮೈಲಿಗಲ್ಲು. ಮೊದಲ ಮೈಲಿಗಲ್ಲನ್ನು ಸಾಧಿಸಿದಾಗ ಅರ್ಹ ನಿಧಿಯ 50% ನೀಡಲಾಗುವುದು.

(iii) ಫಲಾನುಭವಿಗೆ ಉದ್ಯೋಗ ಕಲ್ಪಿಸಿದ ನಂತರ 60 ದಿನಗಳ ಪೂರ್ಣಗೊಳ್ಳುವಿಕೆ ಎರಡನೆಯ ಮೈಲಿಗಲ್ಲು ಆಗುವುದು. ಅರ್ಹ ನಿಧಿಯ ಬಾಕಿ 50% ಪಾವತಿಯನ್ನು ಎರಡನೆಯ ಮೈಲಿಗಲ್ಲನ್ನು ಸಾಧಿಸಿದಾಗ ಮಾಡಲಾಗುವುದು.

(ಊ) ಉದ್ಯೋಗದ ಮಾನದಂಡ

ಉದ್ಯೋಗ ಒದಗಿಸುವಿಕೆಯನ್ನು ಖಚಿತಪಡಿಸುವ ಸಲುವಾಗಿ ಎಲ್ಲಾ ತರಬೇತಿ ಕಾರ್ಯಕ್ರಮಗಳನ್ನು ಉದ್ಯಮದ ಅಗತ್ಯದೊಂದಿಗೆ ಸಂಯೋಜಿಸಲಾಗುವುದು. ಪಿ.ಐ.ಏ.ಗಳು / ಇನ್ಸ್ಟಿಟ್ಯೂಟ್‌ಗಳು ಕನಿಷ್ಠ 80% ನಿಯೋಜನೆಗಳನ್ನು ಪಡೆಯತಕ್ಕದ್ದು.

(ಋ) ತರಬೇತಿಯ ವಿಷಯ

ಎಲ್ಲಾ ತರಬೇತಿ ವಿಷಯವು ಪ್ರಮಾಣೀಕೃತವಾಗಿದ್ದು ರಾಜ್ಯ ಮಟ್ಟದ ಸಮಿತಿ / ಇಲಾಖೆಯ ಅನುಮೋದನೆಯನ್ನು ಪಡೆದಿರತಕ್ಕದ್ದು. ಇದರಿಂದಾಗಿ ವಿಷಯದ ಗುಣಮಟ್ಟ ಮತ್ತು ಏಕರೂಪತೆಯನ್ನು ಖಚಿತಪಡಿಸಬಹುದು.

(ಎ) ಮ್ಯಾನೇಜ್ಮೆಂಟ್ ಇನ್ಫರ್ಮೇಶನ್ ಸಿಸ್ಟಮ್ಸ್ (ಎಮ್.ಐ.ಎಸ್)

ಎಮ್.ಐ.ಎಸ್.ನಿಂದಾಗಿ ತರಬೇತಿ ಮತ್ತು ಉದ್ಯೋಗ ನಿಯೋಜನೆ ಕಾರ್ಯಕ್ರಮದ ಮೇಲೆ ಕಾರ್ಯಾತ್ಮಕ ನಿಯಂತ್ರಣವನ್ನು ಹೊಂದಲು ಕೈಮಗ್ಗ ಮತ್ತು ಜವಳಿ ಇಲಾಖೆಗೆ ಸಹಾಯವಾಗುವುದು. ತನ್ಮೂಲಕ ಕಾರ್ಯಕ್ರಮದ ಗುಣಮಟ್ಟವನ್ನು ಕಾಪಾಡಿಕೊಂಡು ಅಗತ್ಯವಿದ್ದಾಗ ಉನ್ನತೀಕರಣಗಳನ್ನು ಮಾಡಿಕೊಳ್ಳಬಹುದಾಗಿದೆ.

**(19)** ಹಾಲಿ ಇರುವ ಘಟಕಗಳಿಗೆ ನೆರವು:

**ವಿಸ್ತರಣೆ / ವೈವಿಧ್ಯೀಕರಣ / ಆಧುನೀಕರಣ / ತಂತ್ರಜ್ಞಾನದ ಉನ್ನತೀಕರಣ**

ಜವಳಿ ಉದ್ಯಮದ ಬೆಳವಣಿಗೆಯನ್ನು ಸಬಲಗೊಳಿಸುವ ಮತ್ತು ಪ್ರೋತ್ಸಾಹಿಸುವ ಸಲುವಾಗಿ ರಾಜ್ಯದ ಉದ್ಯಮಗಳು ಅಧುನೀಕೃತ / ವೈವಿಧ್ಯೀಕೃತ / ವಿಸ್ತೃತ ಮತ್ತು ಉನ್ನತೀಕೃತಗೊಳಿಸಿದ ತಂತ್ರಜ್ಞಾನವನ್ನು ಹೊಂದಿರುವ ಅಂಶವನ್ನು ಸ್ಥಾಪಿಸಿದ ಹಾಲಿ ಇರುವ ಜವಳಿ ಘಟಕಗಳಿಗೆ ಕರ್ನಾಟಕ ಸರ್ಕಾರವು ಬೆಂಬಲವನ್ನೊದಗಿಸುವುದು. ಇದರಿಂದಾಗಿ ಅಂತರಾಷ್ಟ್ರೀಯ ಪರಿಸರೀಯ ಮತ್ತು ಸಾಮಾಜಿಕ ಮಾನದಂಡಗಳನ್ನು ಪೂರೈಸಲು ಹಾಲಿ ಇರುವ ಜವಳಿ ಘಟಕಗಳಿಗೆ ಅನುಕೂಲವಾಗುತ್ತದೆ. ಇದಲ್ಲದೆ, ಈ ಘಟಕಗಳು ಉತ್ತಮ ಲಾಭಗಳಿಕೆಯನ್ನು ಗುರಿಯಾಗಿಸಲು ಸಹಾಯವಾಗುತ್ತದೆ ಮತ್ತು ಹಾಲಿ ಇರುವ ಜವಳಿ ಉದ್ಯಮದ ವಿಶ್ವಾಸವನ್ನು ವರ್ಧಿಸುತ್ತದೆ.

(1) ಮೇಲ್ಕಂಡ ನೆರವಿನ ಉದ್ದೇಶಕ್ಕಾಗಿ, ಚಟುವಟಿಕೆಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ:

a) **<u>ವಿಸ್ತರಣೆ –</u>** ಜವಳಿ ಮತ್ತು ಉಡುಪಿನ ವಲಯದ ಹಾಲಿ ಇರುವ ಘಟಕಗಳು ಸ್ಥಾವರ ಮತ್ತು ಯಂತ್ರೋಪಕರಣಗಳಲ್ಲಿ ಹೂಡಿಕೆ ಮಾಡಿದ ಸಂದರ್ಭದಲ್ಲಿ ಘಟಕಗಳು ಅದೇ ವ್ಯಾಪಾರ ಅಥವಾ ಉಪ–ವಲಯಕ್ಕೆ ವಿಸ್ತರಿಸಲು ಬಂಡವಾಳ ವಿಸ್ತರಣೆಯನ್ನು ಒಳಗೊಳ್ಳುತ್ತಿರುವುದಾಗಿ ಪರಿಗಣಿಸಲಾಗುವುದು.

b) **<u>ವೈವಿಧ್ಯೀಕರಣ–</u>** ಜವಳಿ ಮತ್ತು ಉಡುಪಿನ ವಲಯದ ಹಾಲಿ ಇರುವ ಘಟಕಗಳು *ಬ್ಯಾಕ್‌ವರ್ಡ್ ಅಥವಾ ಫಾರ್ವರ್ಡ್ ಇಂಟಿಗ್ರೇಶನ್* ಕೈಗೊಂಡ ಸಂದರ್ಭದಲ್ಲಿ, ಘಟಕಗಳು ಜವಳಿ ಮೌಲ್ಯ ಸರಣಿಯೊಳಗೆ ವೈವಿಧ್ಯೀಕರಣವನ್ನು ಒಳಗೊಳ್ಳುತ್ತಿರುವುದಾಗಿ ಪರಿಗಣಿಸಲಾಗುವುದು. ಸದರಿ ಸಂಯೋಜನೆಯು ಹಿಮ್ಮುಖ ಅಥವಾ ಮುಂದಿನ ಸರಪಣಿಯೊಳಗೆ (ಫಾರ್ವರ್ಡ್ ಅಥವಾ ಬ್ಯಾಕ್ವರ್ಡ್ ಚೈನ್) ತತ್ಕ್ಷಣದ ಚಟುವಟಿಕೆ ಅಥವಾ ಮೌಲ್ಯ ಸರಣಿಯ ಯಾವುದೇ ಚಟುವಟಿಕೆಯಾಗಿರಬಹುದು.

c) **<u>ಆಧುನೀಕರಣ / ತಂತ್ರಜ್ಞಾನದ ಉನ್ನತೀಕರಣ –</u>** ಜವಳಿ ಮತ್ತು ಉಡುಪಿನ ವಲಯದ ಹಾಲಿ ಇರುವ ಘಟಕಗಳು ನಿರ್ದಿಷ್ಟ ವಿಧದ ಸ್ಥಾವರ ಮತ್ತು ಯಂತ್ರೋಪಕರಣಗಳನ್ನು ಹೊಂದಿದ್ದು ಹಾಲಿ ಇರುವ ಸ್ಥಾವರ ಮತ್ತು ಯಂತ್ರೋಪಕರಣಗಳ ಬದಲಿಯಾಗಿ ಸ್ಥಾವರ ಮತ್ತು ಯಂತ್ರೋಪಕರಣಗಳ ಉನ್ನತೀಕೃತ ಆವೃತ್ತಿಯನ್ನು (ಭಾರತ ಸರ್ಕಾರದ ಟಿ.ಯು.ಎಫ್.ಎಸ್ ಯೋಜನೆಯಲ್ಲಿ ಸೂಚಿಸಿರುವಂತೆ) ತರಿಸಿರುವ ಸಂದರ್ಭದಲ್ಲಿ ಅವು ಆಧುನೀಕರಣ / ತಂತ್ರಜ್ಞಾನದ ಉನ್ನತೀಕರಣವನ್ನು ಒಳಗೊಳ್ಳುತ್ತಿರುವ ಘಟಕಗಳೆಂದು ಪರಿಗಣಿಸಲಾಗುವುದು.

**ಸೂಚನೆ:** *ಮೇಲೆ ಸೂಚಿಸಿರುವ ಎಲ್ಲಾ ಸಂದರ್ಭಗಳಲ್ಲಿ, ಪ್ರಸ್ತಾವನೆಗಳನ್ನು ಅನುಮೋದನೆಗಾಗಿ ಪರಿಗಣಿಸಲು ಅರ್ಜಿಯ ದಿನಾಂಕದಂದು ಹಾಲಿ ಇರುವ ಸ್ಥಾವರ ಮತ್ತು ಯಂತ್ರೋಪಕರಣಗಳ ಮೌಲ್ಯದ ಕನಿಷ್ಠ 15% ಹೂಡಿಕೆಯಿರುವುದು ಪೂರ್ವಾಪೇಕ್ಷಿತ.*

(2) ಹಾಲಿ ಇರುವ ಘಟಕಗಳು ಮೇಲೆ ಸೂಚಿಸಿದ ಮಾನದಂಡಗಳ ಅನುಸಾರ ನಿಧಿಯನ್ನು ಕೋರಿದಾಗ ಒದಗಿಸುವ ಪ್ರೋತ್ಸಾಹಧನವು ಈ ಕೆಳಗಿನಂತಿರುವುದು:

| ಕ್ರ.ಸಂ | ಪ್ರೋತ್ಸಾಹ ಧನ | ವಲಯ–1 | ವಲಯ–2 |
|---|---|---|---|
| 1 | **ಕ್ರೆಡಿಟ್ ಲಿಂಕ್ಡ್ ಬಂಡವಾಳ ಅನುದಾನ – ಸ್ಥಾವರ & ಯಂತ್ರೋಪಕರಣ** | ಸ್ಥಾವರ & ಯಂತ್ರೋಪಕರಣದ ಮೌಲ್ಯದ 20% ಅಥವಾ ರೂ. 1.00 ಕೋಟಿ ಇವುಗಳಲ್ಲಿ ಯಾವುದು ಕಡಿಮೆಯೋ ಅದು. | ಸ್ಥಾವರ & ಯಂತ್ರೋಪಕರಣದ ಮೌಲ್ಯದ 15% ಅಥವಾ ರೂ. 75 ಲಕ್ಷ ಇವುಗಳಲ್ಲಿ ಯಾವುದು ಕಡಿಮೆಯೋ ಅದು. |
| 2 | **ಬಡ್ಡಿ ಅನುದಾನ** | ಉದ್ಯಮಿಗಳಿಗೆ ಸಹಾಯಕವಾಗಿ ರೂ.99 ಕೋಟಿಗಳವರೆಗಿನ ಹೂಡಿಕೆಯ ಮೇಲೆ ಅವರಿಗೆ ಬಡ್ಡಿ ಅನುದಾನವನ್ನು ಒದಗಿಸಲಾಗುವುದು.<br>ಪ್ರೋತ್ಸಾಹ ಧನದ ಪರಿಚ್ಛೇದ (1)ರ ಅನುಸಾರ ಅನ್ವಯಿಸುವ ಬಂಡವಾಳ ಅನುದಾನದ ಮೊತ್ತವನ್ನು ಈ ಕೆಳಗಿನಂತೆ ವರ್ಗೀಕರಿಸಲಾಗುವುದು:<br>(ಅ) ಅವಶ್ಯಕ ಅಭಿವೃದ್ಧಿ ಮೈಲಿಗಲ್ಲನ್ನು ಪೂರೈಸಿದಲ್ಲಿ ಅನುಮೋದಿತ ಅನುದಾನದ 50%<br>(ಆ) ಬ್ಯಾಂಕುಗಳು / ಆರ್ಥಿಕ ಸಂಸ್ಥೆಗಳಿಂದ ಅವಶ್ಯಕ ಬಡ್ಡಿ / ನಿರ್ಬಂಧಗಳನ್ನು ಮತ್ತು ಆರ್ಥಿಕ ಮೈಲಿಗಲ್ಲನ್ನು ಪೂರೈಸಿದಲ್ಲಿ ಐದು ವರ್ಷಗಳಿಗೆ ಬಡ್ಡಿ ಅನುದಾನವಾಗಿ ಅನುಮೋದಿತ ಅನುದಾನದ 50%.<br>ಒದಗಿಸಿರುವ ಬಡ್ಡಿ ಅನುದಾನವು ಯಾವುದೇ ಸಂದರ್ಭದಲ್ಲೂ ಲಭ್ಯವಾಗಿಸಿದ ಪ್ರೋತ್ಸಾಹಕ ಧನದ ವಿಭಾಗ (1)ರಲ್ಲಿ ಸೂಚಿಸಿರುವ ಬಂಡವಾಳವನ್ನು ಮೀರುವುದಿಲ್ಲ. | |

**(20) ನೀತಿಯ ಅವಧಿಗೆ (2013–2018) ಯೋಜಿತ ಬಜೆಟ್ ಹೂಡಿಕೆ**

ಏಪ್ರಿಲ್ 1, 2013 ರಿಂದ ಮಾರ್ಚ್ 31, 2018 ರವರೆಗಿನ ನೀತಿಯ ಅವಧಿಯ ನೂತನ ಜವಳಿ ನೀತಿಗಾಗಿ ವಿವಿಧ ಮಧ್ಯವರ್ತನೆಗಳ ಉದ್ದಕ್ಕೂ, ಯೋಜಿಸಿರುವ ಆಯವ್ಯಯ ವೆಚ್ಚ ರೂ. 1000 ಕೋಟಿಗಳು (ರೂಪಾಯಿ ಒಂದು ಸಾವಿರ ಕೋಟಿ ಮಾತ್ರ). ಯೋಜಿತ ಬಜೆಟ್ ವ್ಯಯದ ಹಂಚಿಕೆ ಮಾಹಿತಿಯನ್ನು ವರ್ಷವಾರು ಮಧ್ಯವರ್ತನೆಗಳ ಅನುಸಾರ **ಅನುಬಂಧ 6** ರಲ್ಲಿ ತೋರಿಸಲಾಗಿದೆ.

**(21) ಸಿಂಗಲ್ ವಿಂಡೋ ಕ್ಲಿಯರೆನ್ಸ್**

(a) ಜವಳಿ ಮತ್ತು ಉಡುಪಿನ ವಲಯಗಳಲ್ಲಿ ಹೂಡಿಕೆಯನ್ನು ಪ್ರೋತ್ಸಾಹಿಸಲು, ಅನುಮತಿಗಳು/ ಪರವಾನಗಿಗಳನ್ನು ನೀಡುವ ಪ್ರಕ್ರಿಯೆಯನ್ನು ಚುರುಕುಗೊಳಿಸಲಾಗುವುದು. ಕರ್ನಾಟಕ ಇಂಡಸ್ಟ್ರೀಸ್ ಫೆಸಿಲಿಟೇಶನ್ ಕಾಯಿದೆ – 2002 ಇದರ ಅನುಸಾರ ಜವಳಿ ಮತ್ತು ಉಡುಪಿನ ಘಟಕಗಳನ್ನು ಸ್ಥಾಪಿಸಲು ಬೇಕಾದ ಎಲ್ಲಾ ವಿಧಗಳ ಕ್ಲಿಯರೆನ್ಸ್‌ಗಳಿಗಾಗಿ ಸಿಂಗಲ್ ವಿಂಡೋ ಕ್ಲಿಯರೆನ್ಸ್ ನೀಡುವ ಸಲುವಾಗಿ ಪರಿಣಾಮಕಾರಿ ಕ್ರಮಗಳನ್ನು ಕೈಗೊಳ್ಳಲಾಗುವುದು.

(b) ಇಂಡಸ್ಟ್ರೀಸ್ ಫೆಸಿಲಿಟೇಶನ್ ಕಾಯಿದೆ – 2002 ರ ಮೂಲಕ ಜವಳಿ ಮತ್ತು ಉಡುಪಿನ ಉದ್ಯಮಕ್ಕೆ ಸಿಂಗಲ್ ವಿಂಡೋ ಕ್ಲಿಯರೆನ್ಸ್ ವ್ಯವಸ್ಥೆಯ ಅನುಸಾರ ಒದಗಿಸಲಾದ ಕ್ಲಿಯರೆನ್ಸ್‌ಗಳನ್ನು ತ್ವರಿತಗೊಳಿಸುವ ಸಲುವಾಗಿ ಕಾಯಿದೆಯಡಿ ರೂಪಗೊಂಡ ಸಮಿತಿಗಳು ಈ ಕೆಳಗಿನಂತೆ ವಿಸ್ತೃತವಾಗಿರುವವು;

(i) ಕರ್ನಾಟಕ ಸರ್ಕಾರದ ಜವಳಿ ಸಚಿವರನ್ನು ರಾಜ್ಯದ ಉನ್ನತಮಟ್ಟದ ಕ್ಲಿಯರೆನ್ಸ್ ಸಮಿತಿ (ಎಸ್.ಎಚ್.ಎಲ್.ಸಿ.ಸಿ)ಯಲ್ಲಿ ಸೇರಿಸಲಾಗುವುದು

(ii) ಕರ್ನಾಟಕ ಸರ್ಕಾರದ ಜವಳಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಇವರನ್ನು ರಾಜ್ಯದ ಉನ್ನತಮಟ್ಟದ ಕ್ಲಿಯರೆನ್ಸ್ ಸಮಿತಿ (ಎಸ್.ಎಚ್.ಎಲ್.ಸಿ.ಸಿ) ಮತ್ತು ರಾಜ್ಯ ಮಟ್ಟದ ಸಿಂಗಲ್ ವಿಂಡೋ ಕ್ಲಿಯರೆನ್ಸ್ ಸಮಿತಿ (ಎಸ್.ಎಲ್.ಎಸ್.ಡಬ್ಲ್ಯೂ.ಸಿ.ಸಿ)ಯಲ್ಲಿ ಸೇರಿಸಲಾಗುವುದು

(iii) ಕೈಮಗ್ಗ ಮತ್ತು ಜವಳಿ ಇಲಾಖೆಯ ಜಿಲ್ಲಾ ಮಟ್ಟದ ಅಧಿಕಾರಿಗಳನ್ನು ಜಿಲ್ಲಾ ಮಟ್ಟದ ಸಿಂಗಲ್ ವಿಂಡೋ ಕ್ಲಿಯರೆನ್ಸ್ ಸಮಿತಿ (ಡಿ.ಎಲ್.ಎಸ್.ಡಬ್ಲ್ಯೂ.ಸಿ.ಸಿ)ಯಲ್ಲಿ ಸೇರಿಸಲಾಗುವುದು

(iv) ರಾಜ್ಯದಲ್ಲಿ ಘಟಕಗಳು/ ಸೌಕರ್ಯಗಳನ್ನು ಸ್ಥಾಪಿಸುತ್ತಿರುವ ಉದ್ಯಮಿಗಳು ಸರಿಯಾಗಿ ತುಂಬಿದ ತಮ್ಮ ಸಂಯೋಜಿತ ಅರ್ಜಿಗಳನ್ನು, ಇಂಡಸ್ಟ್ರೀಸ್ ಫೆಸಿಲಿಟೇಶನ್ ಕಾಯಿದೆ– 2002ರಲ್ಲಿ ಸೂಚಿಸಿರುವ ಅನುಸಾರ, ಕೈಮಗ್ಗ ಮತ್ತು ಜವಳಿ ಇಲಾಖೆ 'ಕ್ಕೆ ಸೂಚನೆಯೊಂದಿಗೆ ನೋಡಲದ ಸಂಸ್ಥೆಗೆ ಸಲ್ಲಿಸುವುದು.

(v) ಸಂಬಂಧಿತ ವಿಭಾಗಗಳಿಂದ ಯೋಜನೆಗಳಿಗೆ ಕ್ಲಿಯರೆನ್ಸ್ ಪಡೆಯುವುದನ್ನು ಸುಗಮಗೊಳಿಸುವ ಸಲುವಾಗಿ ಕೈಮಗ್ಗ ಮತ್ತು ಜವಳಿ ಇಲಾಖೆಯಲ್ಲಿ ಒಂದು ಸಹಾಯ ವಿಭಾಗವನ್ನು (ಫೆಸಿಲಿಟೇಶನ್ ಡೆಸ್ಕ್) ರಚಿಸಲಾಗುವುದು. ಯೋಜನೆಯ ಕ್ಲಿಯರೆನ್ಸ್‌ಗಳನ್ನು ತ್ವರಿತಗೊಳಿಸಲು ಮತ್ತು ಆಯಾ ವಿಭಾಗಗಳು / ಸಂಸ್ಥೆಗಳೊಂದಿಗೆ ಸರಿಯಾದ ದಾಖಲಾತಿಯನ್ನು ಕೈಗೊಳ್ಳುವ ಸಲುವಾಗಿ ಸಹಾಯ ವಿಭಾಗಕ್ಕೆ ಎಸ್.ಎಮ್.ಏ ಬೆಂಬಲ ನೀಡುವುದು.

**(22) ಪುನರ್ವಿಮರ್ಶೆ/ ಮೇಲ್ವಿಚಾರಣೆ:**

(a) ಈ ನೀತಿಯ ಪರಿಣಾಮಕಾರಿ ಅನುಷ್ಠಾನಕ್ಕಾಗಿ ಈ ಕೆಳಗಿನ ಸಮಿತಿಗಳನ್ನು ಸ್ಥಾಪಿಸಲಾಗುವುದು:

(i) ಕರ್ನಾಟಕ ಸರ್ಕಾರದ ಜವಳಿ ಸಚಿವರ ಅಧ್ಯಕ್ಷತೆಯಲ್ಲಿ ಉನ್ನತಮಟ್ಟದ ಉನ್ನತಾಧಿಕಾರ ಸಮಿತಿ (ಎಚ್.ಎಲ್.ಈ.ಸಿ) ಯನ್ನು ಸ್ಥಾಪಿಸುವುದು. ಜವಳಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಇವರು ಈ ಸಮಿತಿಯ ಸದಸ್ಯ ಕಾರ್ಯದರ್ಶಿ / ಸಂಚಾಲಕರಾಗುವರು. ಈ ಸಮಿತಿಯು ಕರ್ನಾಟಕ ಸರ್ಕಾರದ ಸಂಬಂಧಿತ ವಿಭಾಗಗಳು ಸಂ. & ಅ. ಸಂಸ್ಥೆಗಳು ಮತ್ತು ಉದ್ಯಮದ ಸಂಘಟನೆಗಳ ಪ್ರತಿನಿಧಿಗಳನ್ನು ಹೊಂದುವುದು. ನೀತಿಯನ್ನು ಕಾರ್ಯಗತಗೊಳಿಸಲು ಮತ್ತು ನೀತಿಯ ಪ್ರಕಾರ ಯೋಜನೆಗಳ ಮೇಲ್ವಿಚಾರಣೆ ಮಾಡಲು ಎಚ್.ಎಲ್.ಈ.ಸಿ.ಯು ಸೂಕ್ತ ನಿರ್ಧಾರಗಳನ್ನು ತೆಗೆದುಕೊಳ್ಳುವ ಜವಾಬ್ದಾರಿ ಹೊಂದುವುದು. ನೀತಿಯನ್ನು ಕಾರ್ಯಗತಗೊಳಿಸಲು ಮತ್ತು ಉದ್ಯಮದ ಬೇಡಿಕೆಯ ಅನುಸಾರ ಮಧ್ಯವರ್ತನೆಗಳಾದ್ಯಂತ ನಿಧಿಯ ಪುನರ್ವಿಂಗಡಣೆ ಮಾಡಲು ಎಚ್.ಎಲ್.ಈ.ಸಿ.ಯು ನಿಯತಕಾಲಿಕ ವಿಮರ್ಷೆಗಳನ್ನು ಕೈಗೊಳ್ಳುವುದು. ಇದರಿಂದ ಸಂಪೂರ್ಣ ಬಳಕೆಯನ್ನು ಖಚಿತಪಡಿಸಲು ಮತ್ತು ರಾಜ್ಯ ಮಟ್ಟದ ಯೋಜನೆಯ ಅನುಷ್ಠಾನ ಸಮಿತಿಗೆ (ಎಸ್.ಎಲ್.ಪಿ.ಐ.ಸಿ) ಸಲಹೆಗಳನ್ನು ನೀಡಲು ಸಹಾಯವಾಗುವುದು.

(ii) ರಾಜ್ಯ ಮಟ್ಟದ ಯೋಜನೆಯ ಅನುಷ್ಠಾನ ಸಮಿತಿ (ಎಸ್.ಎಲ್.ಪಿ.ಐ.ಸಿ)ಯನ್ನು ಕರ್ನಾಟಕ ಸರ್ಕಾರದ ಕಾರ್ಯದರ್ಶಿಗಳು (ಜವಳಿ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಸ್ಥಾಪಿಸಲಾಗಿದೆ. ಜವಳಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು ಕೈಮಗ್ಗ ಮತ್ತು ಜವಳಿ ಇಲಾಖೆ ಇವರು ಸಮಿತಿಯ ಕಾರ್ಯದರ್ಶಿ / ಸಂಚಾಲಕರಾಗಿರುವರು. ಈ ಸಮಿತಿಯು ಕರ್ನಾಟಕ ಸರ್ಕಾರದ ಸಂಬಂಧಿತ ವಿಭಾಗಗಳು, ಸಂ. & ಅ. ಸಂಸ್ಥೆಗಳು ಮತ್ತು ಉದ್ಯಮದ ಸಂಘಟನೆಗಳ ಪ್ರತಿನಿಧಿಗಳನ್ನು ಹೊಂದುವುದು. ಎಸ್.ಎಲ್.ಪಿ.ಐ.ಸಿ.ಯು ವಿಸ್ತೃತ ಕಾರ್ಯಾಚರಣೆ ಕಾರ್ಯವಿಧಾನಗಳ ಅಭಿವೃದ್ಧಿ ಮತ್ತು ನೀತಿಯ ಅನುಷ್ಠಾನ ಮತ್ತು ನೀತಿಯ ಅನುಸಾರ ಯೋಜನೆಗಳಿಗೆ ಪ್ರೋತ್ಸಾಹಧನದ ಮಂಜೂರಾತಿ ಮತ್ತು ಅದರ ಮೇಲ್ವಿಚಾರಣೆಯ ಜವಾಬ್ದಾರಿ ಹೊಂದಿರುತ್ತದೆ.

(b) ನೀತಿಯ ಪ್ರತಿ ಅಂಗಗಳ ವಿಸ್ತೃತ ಕಾರ್ಯಾಚರಣೆಯ ಸೂಚನೆಗಳನ್ನು ಪ್ರತ್ಯೇಕವಾಗಿ ತಯಾರಿಸಲಾಗುವುದು ಮತ್ತು ಮುದ್ರಿಸಲಾಗುವುದು.

**(23) ನೀತಿಯ ನಿರ್ವಹಣೆ**

(a) ಕೈಮಗ್ಗ ಮತ್ತು ಜವಳಿ ಇಲಾಖೆಯು ರಾಜ್ಯದುದ್ದಕ್ಕೂ ರಚನಾತ್ಮಕ ಮಾದರಿಯಲ್ಲಿ ನೀತಿಯನ್ನು ನಿರ್ವಹಿಸುವ ಜವಾಬ್ದಾರಿ ಹೊಂದಿರುತ್ತದೆ. ನಿರ್ವಹಣೆಯ ಪ್ರಸಕ್ತ ಮಾದರಿಯನ್ನು ಸೂಕ್ತವಾಗಿ ಪುನರ್ವಿಮರ್ಷಿಸಲಾಗುವುದು. ಜವಳಿ ಮತ್ತು ಉಡುಪು ತಯಾರಿಕಾ ಉದ್ಯಮದ ಅಗತ್ಯವು ಹೆಚ್ಚೆಚ್ಚು ಸಂಕೀರ್ಣಗೊಳ್ಳುತ್ತಿರುವುದರಿಂದ, ಉದ್ಯಮದ ಅಗತ್ಯಗಳಿಗೆ ಸ್ಪಂದಿಸಲು ಒಂದು ಸೂಕ್ತ ಮಾದರಿಯನ್ನು ಬಳಸಬೇಕಾಗುವುದು. ಈ ಮಾದರಿಯು ಸೂಕ್ತ ಸೌಲಭ್ಯಗಳ ರಚನೆ ಮತ್ತು ಯೋಜನಾ ಕ್ಲಿಯರೆನ್ಸ್‌ಗಳು, ಅನುಮತಿಗಳ ತ್ವರಿತಗೊಳಿಸುವಿಕೆ ಮತ್ತಿತರ ದೈನಂದಿನ ಅನುಷ್ಠಾನ ಕಾರ್ಯಗಳ ನಿರ್ಧಾರ ತೆಗೆದುಕೊಳ್ಳುವಿಕೆಯತ್ತ ಗಮನಹರಿಸುವುದು.

(b) ಹಾಗೆಯೇ, ತಾಂತ್ರಿಕ ಜವಳಿಗಳ ಉಪ ವಲಯಗಳು ಜವಳಿ ಮೌಲ್ಯ ಸರಣಿಯಲ್ಲಿ ಒಳ್ಳೆಯ ಪ್ರಾಮುಖ್ಯತೆ ಪಡೆಯುತ್ತಿವೆ. ಹಾಗಾಗಿ, ಉದ್ಯಮದ ಅಗತ್ಯಗಳನ್ನು ಪೂರೈಸುವ ಸಲುವಾಗಿ ಕೈಮಗ್ಗ ಮತ್ತು ಜವಳಿ ಇಲಾಖೆಯು ಅವಶ್ಯಕ ಸಾಮರ್ಥ್ಯವನ್ನು ಆಂತರಿಕವಾಗಿ ಹೊಂದಿರುವುದು ಅಗತ್ಯವಾಗಿದೆ. ಈ ಕಾರಣದಿಂದ ಉದ್ಯಮದ ಅಗತ್ಯಗಳನ್ನು ಪೂರೈಸಲು ಮತ್ತು ವಲಯದ ಎಲ್ಲಾ ಸಂಬಂಧಿತ ಮಧ್ಯಸ್ಥಗಾರರ ನಡುವಿನ ಜ್ಞಾನ–ಅಂತರ (ನಾಲೆಜ್ ಗ್ಯಾಪ್)ವನ್ನು ತುಂಬುವ ಸಲುವಾಗಿ ಈ ಮಾದರಿಯು ಪ್ರಸ್ತುತ ಸ್ಥಾಪನೆಯ ಸೂಕ್ತ ನವೀಕರಣವನ್ನು ಮಾಡುವತ್ತ ಗಮನಹರಿಸುವುದು.

(c) ಸುವರ್ಣ ವಸ್ತ್ರ ನೀತಿ 2008–2013 ಕ್ಕಾಗಿ ಯೋಜನೆಯ ನಿರ್ವಹಣಾ ಸಂಘಟನೆ (ಎಸ್.ಎಮ್.ಎ) ಆಗಿ ಐ.ಎಲ್&ಎಫ್.ಎಸ್ ಕ್ಲಸ್ಟರ್ ಡೆವಲಪ್‌ಮೆಂಟ್ ಇನಿಶಿಯೇಟಿವ್ ಲಿಮಿಟೆಡ್ ಎಂಬ ಸಮರ್ಪಿತ ವೃತ್ತಿಪರ ಸಂಸ್ಥೆಯನ್ನು ನೇಮಿಸಲಾಗಿತ್ತು. ಎಸ್.ಎಮ್.ಎ.ಯು ಕರ್ನಾಟಕ ಸರ್ಕಾರದ ಕೈಮಗ್ಗ ಮತ್ತು ಜವಳಿ ಇಲಾಖೆಗೆ ಹೂಡಿಕೆದಾರರನ್ನು ಮಾರ್ಗದರ್ಶಿಸಲು ಮತ್ತು ರಾಜ್ಯಾದ್ಯಂತ ಯೋಜನೆಯ ನಿರ್ವಹಣೆಗೆ ಬೆಂಬಲ ನೀಡಲು ಸಹಾಯವನ್ನೊದಗಿಸುತ್ತದೆ. ಇದೇ ರೀತಿ ವೃತಿಪರ ಸಲಹೆಗಾರರ ಬೆಂಬಲವನ್ನು ನಿಯಮಾನುಸಾರ **"ನೂತನ ಜವಳಿ ನೀತಿ 2013–2018"** ಅನುಷ್ಠಾನಗೊಳಿಸಲು ಪಡೆಯಲಾಗುವುದು.

(d) ಈ ಎಸ್.ಎಮ್.ಎ ನಿಯೋಜನೆಯು ನೀತಿಯ ಪ್ರತಿಯೊಂದು ಅಂಗದ ಕಾರ್ಯಚರಣೆಗೆ ಸೂಚನೆಗಳನ್ನು ಅಭಿವೃದ್ಧಿ ಪಡಿಸುವುದು ಮತ್ತು ಸಂಭಾವ್ಯ ಯೋಜನಾ ಪ್ರವರ್ತಕರನ್ನು ಗುರುತಿಸುವುದು, ಪ್ರಸ್ತಾವನೆಗಳನ್ನು ವಿಧ್ಯುಕ್ತಗೊಳಿಸಲು ಯೋಜನಾ ಪ್ರವರ್ತಕರಿಗೆ ಅಗತ್ಯದನುಸಾರ ಬೆಂಬಲ ನೀಡುವುದರಲ್ಲಿ ಇಲಾಖೆಗೆ ಸಹಾಯ ನೀಡುವುದರಿಂದ ಹಿಡಿದು ಸೇವೆಗಳ ಒಂದು ಪೂರ್ಣ ಶ್ರೇಣಿಯನ್ನು ಒಳಗೊಳ್ಳುವುದು. ಎಸ್.ಎಮ್.ಎ.ಯು ಸೂಕ್ತ ಪ್ರಸ್ತಾವನೆಗಳ ಮೌಲ್ಯ ನಿರ್ಣಯ ಮತ್ತು ಅನುಮೋದನೆ ಮಾಡಲು ಇಲಾಖೆಗೆ ಸಹಾಯ ನೀಡುವುದು.

(e) ಯೋಜನೆಗಳಿಗೆ ಬೆಂಬಲ ಧನದ ಬಿಡುಗಡೆ, ಸ್ಪೆಶಲ್ ಪರ್ಪಸ್ ವೆಹಿಕಲ್ / ಇತರ ನಿರ್ದಿಷ್ಟ ಅಳವಡಿಕೆ ಮಾದರಿಗಳ ಅನುಷ್ಠಾನ ಮತ್ತು ವ್ಯವಸ್ಥಿತಗೊಳಿಸುವಿಕೆ, ಅಗತ್ಯವಿದ್ದಲ್ಲಿ ಬ್ಯಾಂಕ್ ಕ್ರೆಡಿಟ್‌ಗಳನ್ನು ಪಡೆಯಲು ಯೋಜನಾ ಪ್ರವರ್ತಕರಿಗೆ ಸಹಾಯ, ಯೋಜನೆಗಳೊಂದಿಗೆ ಸಮಷ್ಟಿ ಹೊಂದಿರುವ ಇತರ ಮಧ್ಯಸ್ಥಗಾರರು / ಯೋಜನೆಗಳಿಂದ ಬೆಂಬಲ ಪಡೆಯುವುದು, ಅಗತ್ಯ ಶಾಸನಬದ್ಧ ಅನುಮೋದನೆಗಳನ್ನು ಪಡೆಯುವುದು, ಯೋಜನೆಗೆ ಸಂಬಂಧಿಸಿದ ಸೇವೆಗಳಿಗಾಗಿ ತೃತೀಯ ಪಕ್ಷದ ಪರಿಣತಿಯನ್ನು ಗುರುತಿಸುವುದು ಮತ್ತು ಆಯ್ಕೆ ಮಾಡುವುದು, ಅಳವಡಿಕೆಯ ಮೇಲ್ವಿಚಾರಣೆ ಮಾಡುವುದು, ಸೂಕ್ತ ಓ&ಎಮ್ ಚೌಕಟ್ಟನ್ನು ಅಭಿವೃದ್ಧಿಪಡಿಸುವುದು, ಉತ್ತಮ ಮೇಲ್ವಿಚಾರಣೆಗಾಗಿ ಐ.ಟಿ.ಯಿಂದ ಸಶಕ್ತಗೊಂಡ ಯೋಜನೆಯ ನಿರ್ವಹಣಾ ವ್ಯವಸ್ಥೆಯನ್ನು ಸ್ಥಾಪಿಸುವುದು ಇತ್ಯಾದಿಗಳಲ್ಲಿ ಎಸ್.ಎಮ್.ಎ.ಯು ಇಲಾಖೆಗೆ ಸಹಾಯ ನೀಡುವುದು.

(f) ಎಸ್.ಎಮ್.ಎ.ಯು ಮಾನವ ಸಂಪನ್ಮೂಲ ಅಭಿವೃದ್ಧಿ ಯೋಜನೆಗಳಿಗಾಗಿ ಹೆಚ್ಚುವರಿ ಬೆಂಬಲವನ್ನು ನೀಡುವುದು. ಇಲ್ಲಿಯ ಕೆಲಸವು ಪಠ್ಯವನ್ನು ಪರಿಶೀಲಿಸಿ ಉದ್ಯಮದ ಬೇಡಿಕೆಯನ್ನು ಪೂರೈಸಲು ಬೇಕಾದ ಸೂಕ್ತ ಬದಲಾವಣೆಗಳನ್ನು ಸೂಚಿಸುವುದು, ನಂಬಲರ್ಹ ಮೌಲ್ಯಮಾಪನ ಮತ್ತು ಪ್ರಮಾಣೀಕರಣ ಸಂಸ್ಥೆಗಳೊಂದಿಗೆ ಸಂಯೋಜನೆಗಳನ್ನು ಸ್ಥಾಪಿಸುವುದು ಮತ್ತು ಸಂಭಾವ್ಯ ಉದ್ಯೋಗದಾತರಿಗೆ ಸಂಯೋಜನೆಗಳನ್ನು ಸ್ಥಾಪಿಸಲು ನೆರವು ನೀಡುವುದನ್ನು ಒಳಗೊಳ್ಳುವುದು.

(g) ನೀತಿಯ ನಿರ್ವಹಣೆಯ ಸಲುವಾಗಿ ಕೈಮಗ್ಗ ಮತ್ತು ಜವಳಿ ಇಲಾಖೆಯು ನೀತಿಯ ಅಳವಡಿಕೆಯ ಸಲುವಾಗಿ ರಚನೆಯಾದ ವಿವಿಧ ಸಮಿತಿಗಳೊಂದಿಗೆ ಮತ್ತು ಉದ್ಯಮದ ಹಲವು ಪಾಲುದಾರರೊಂದಿಗೆ ನಿಯತಕಾಲಿಕವಾಗಿ ಸಂಘಟಿಸುವುದು.

(h) ನೀತಿಯ ಅನುಸಾರ ಯೋಜನೆಯ ಅಭಿವೃದ್ಧಿ ಮತ್ತು ಯೋಜನೆಯ ನಿರ್ವಹಣಾ ವೆಚ್ಚದ ಉದ್ದೇಶಕ್ಕಾಗಿ ಕೈಮಗ್ಗ ಮತ್ತು ಜವಳಿ ಇಲಾಖೆಯು ನಡೆಸುವ ಎಲ್ಲಾ ಚಟುವಟಿಕೆಗಳಿಗಾಗಿ 10% ಅನುದಾನವನ್ನು ಮೀಸಲಿಡಲಾಗಿದೆ.

(i) ರಾಜ್ಯದಲ್ಲಿ ನೀತಿಯ ನಿರ್ವಹಣೆಯ ಅಂಗವಾಗಿ ಕೈಗೊಳ್ಳಬೇಕಾಗಿರುವ ವಿವಿಧ ಚಟುವಟಿಕೆಗಳು ಈ ಕೆಳಗಿನಂತಿವೆ;

- (i) ಉದ್ಯಮಕ್ಕೆ ನೀತಿ ಮತ್ತು ಅದರ ಪ್ರಯೋಜನಗಳ ಪ್ರಸರಣ
- (ii) ರಾಜ್ಯದ ವಿವಿಧ ಸ್ಥಳಗಳಲ್ಲಿ ಕಾರ್ಯಗಾರಗಳನ್ನು ಕೈಗೊಳ್ಳುವುದು
- (iii) ಕೈಪಿಡಿಗಳು / ಭಿತ್ತಿಪತ್ರಗಳ ಮುದ್ರಣ
- (iv) ವೆಬ್‌ಸೈಟ್ ರಚನೆ ಮತ್ತು ಅದರ ನಿರ್ವಹಣೆ
- (v) ಉದ್ಯಮದ ಸ್ಪರ್ಧಿಗಳನ್ನು ಆಮಂತ್ರಿಸಿ ರಸ್ತೆ ಪ್ರದರ್ಶನಗಳನ್ನು ಮಾಡುವುದು
- (vi) ವಿವಿಧ ರಸ್ತೆ ಪ್ರದರ್ಶನಗಳು ಮತ್ತು ಮಾರುಕಟ್ಟೆ ರಚನೆ ಉಪಕ್ರಮಗಳಿಗಾಗಿ ಉದ್ಯಮದ ಪಾಲುಗಾರರೊಂದಿಗೆ ಕೈಮಗ್ಗ ಮತ್ತು ಜವಳಿ ಇಲಾಖೆಯ ಅಧಿಕಾರಿಗಳ ವಿದೇಶ ಭೇಟಿ
- (vii) ವ್ಯಾಪಾರೋದ್ಯಮ, ಕಾರ್ಮಿಕ ಮಾಹಿತಿ ಇತ್ಯಾದಿಗಳ ಡೇಟಾಬೇಸ್‌ಗಳನ್ನು ರಚಿಸಲು ಕೈಮಗ್ಗ ಮತ್ತು ಜವಳಿ ಇಲಾಖೆಯೊಳಗೆ ಮಾರ್ಕೆಟಿಂಗ್ ಇಂಟೆಲಿಜೆನ್ಸ್ ಘಟಕವನ್ನು ಸ್ಥಾಪಿಸಲು ಅಥವಾ ಅಂಥ ಚಟುವಟಿಕೆಗಳಿಗೆ ಹೊರಗುತ್ತಿಗೆ ನೀಡಲು ಮತ್ತು ವಿವಿಧ ಜಿಲ್ಲೆಗಳಿಂದ ಮಾಹಿತಿಯನ್ನು ಸಂಗ್ರಹಿಸಲು ಬೇಕಾದ ವೆಚ್ಚಗಳು
- (viii) ಉದ್ಯಮದ ಘಟಕಗಳು ಮತ್ತು ತರಬೇತಿ ಸಂಸ್ಥೆಗಳು ಮತ್ತಿತರ ಸಂಘಟನೆಗಳಂಥ ಹಲವು ಇತರ ಪಾಲುಗಾರರೊಂದಿಗೆ ಸಕ್ರಿಯ ಸಂಬಂಧ ಸಿದ್ಧಪಡಿಸುವಿಕೆ ಮತ್ತು ಭೇಟಿಗಳು
- (ix) ಅಳವಡಿಕೆಯ ಪ್ರಗತಿಯ ಮೇಲ್ವಿಚಾರಣೆಗಾಗಿ ಐ.ಟಿ. ಸೌಕರ್ಯಗಳನ್ನು ಸ್ಥಾಪಿಸುವುದು
- (x) ಕಾಲಾನುಕಾಲಕ್ಕೆ ಅಗತ್ಯವೆನಿಸಿದಂತೆ ವಿಶೇಷ ಚಟುವಟಿಕೆಗಳನ್ನು ಕೈಗೊಳ್ಳಲು ವಿವಿಧ ಸಲಹೆಗಾರರ ನೇಮಕಾತಿ
- (xi) ಪರಿಣಾಮಕಾರಿ ಅಳವಡಿಕೆಗಾಗಿ ವಿಭಾಗದ ನಿರ್ದೇಶನಾಲಯ ಮತ್ತು ಎಲ್ಲಾ ಜಿಲ್ಲಾ ಮಟ್ಟದ ಕಛೇರಿಗಳಿಗೆ ವಾಹನಗಳನ್ನು ನೀಡುವುದು

(j) ಹಿಂದಿನ ನೀತಿ ಅವಧಿಯಲ್ಲಿ ಹೂಡಿಕೆಗಳನ್ನು ಮಾಡಿ, ಪ್ರೋತ್ಸಾಹಧನಕ್ಕೆ ಬೇಡಿಕೆ ಸಲ್ಲಿಸಿದ ಹೂಡಿಕೆದಾರರು ಹಿಂದಿನ ನೀತಿಯ ಅನುಸಾರವೇ ಬೆಂಬಲ ಪಡೆಯಲು ಮುಂದುವರೆಯುವರು. ಹಿಂದಿನ ನೀತಿ ಅವಧಿಯಲ್ಲಿ ಸ್ಥಾಪನೆಯಾದ ಆದರೆ ಹಿಂದಿನ ನೀತಿಯಡಿ ಪ್ರೋತ್ಸಾಹ ಧನವನ್ನು ಪಡೆಯದ ಹೂಡಿಕೆದಾರರಿಗೆ ಹೊಸ ನೀತಿಯ ಅವಧಿಯಲ್ಲಿ ಪ್ರೋತ್ಸಾಹ ಧನವನ್ನು ಪಡೆಯಲು 6 ತಿಂಗಳ ಸಮಯ (ಹೊಸ ನೀತಿಯ ಪ್ರಕಟಣೆಯ ದಿನಾಂಕದಿಂದ) ನೀಡಲಾಗುವುದು.

**ಅನುಬಂಧ 1: ಸುವರ್ಣ ವಸ್ತ್ರ ನೀತಿ(2008–2013)ಯ ಅಡಿಯಲ್ಲಿ ಹೂಡಿಕೆಗಳ ಚಿತ್ರಣ**

(1) ತಮ್ಮದೇ ಆದ ಜವಳಿ ನೀತಿಯನ್ನು ಹೊಂದಿರುವ ಭಾರತದ ಕೆಲವೇ ರಾಜ್ಯಗಳಲ್ಲಿ ಕರ್ನಾಟಕವು ಒಂದು. ಜವಳಿ ಮತ್ತು ಸಿದ್ಧ ಉಡುಪಿನ ವಲಯದಲ್ಲಿ ಹೂಡಿಕೆಗಳನ್ನು ಪ್ರೋತ್ಸಾಹಿಸಲು ಮತ್ತು ಈ ವಲಯದಲ್ಲಿ ರಾಜ್ಯವು ತನ್ನ ನಿಜವಾದ ಸಾಮರ್ಥ್ಯವನ್ನು ಪೂರೈಸಲು ಕರ್ನಾಟಕ ಸರ್ಕಾರವು ಒಂದು ದಿಟ್ಟ ಮತ್ತು ಆಕ್ರಮಣಶೀಲ ಹೆಜ್ಜೆಯನ್ನಿರಿಸಿತು. 2008 ರಲ್ಲಿ ಸರ್ಕಾರವು ಐದು ವರ್ಷಗಳ ಅವಧಿಗೆ "ಸುವರ್ಣ ವಸ್ತ್ರ ನೀತಿ 2008–2013" ಎಂಬ ಜವಳಿ ನೀತಿಯನ್ನು ಪ್ರಕಟಿಸಿತು.

(2) ನೀತಿಯ ಧ್ಯೇಯ ವಲಯದ ಸಮಗ್ರ ಅಭಿವೃದ್ಧಿಯಾಗಿತ್ತು. ಜವಳಿ ಮೌಲ್ಯ ಸರಣಿಯ ಚಟುವಟಿಕೆಗಳ ಸಬಲೀಕರಣ, ಜವಳಿ ಮತ್ತು ಉಡುಪಿನ ಘಟಕಗಳ ಭೌಗೋಳಿಕ ಪ್ರಸರಣ, ಮಾನವ ಸಂಪನ್ಮೂಲ ಅಭಿವೃದ್ಧಿ, ಮೂಲಭೂತ ಸೌಕರ್ಯಗಳ ಅಭಿವೃದ್ಧಿ, ಮಾರುಕಟ್ಟೆ ಅಭಿವೃದ್ಧಿಯ ಕುರಿತಂತೆ ಸಾಮರ್ಥ್ಯ ರಚನೆ, ವಿನ್ಯಾಸ ಅಭಿವೃದ್ಧಿ ಮತ್ತು ಉತ್ಪನ್ನ ವೈವಿಧ್ಯೀಕರಣ, ಸಂಪೂರ್ಣ ಜವಳಿ ಮೌಲ್ಯ ಸರಣಿಯ ತಂತ್ರಜ್ಞಾನದ ಉನ್ನತೀಕರಣ ಹಾಗೂ ಮಾನದಂಡ ಮತ್ತು ಅನುವರ್ತನೆಗಳು ಮಧ್ಯವರ್ತನೆಯ ಕೇಂದ್ರೀಕರಣ ವಿಷಯಗಳಾಗಿದ್ದವು.

(3) 2008–2013 ರವರೆಗಿನ ಜವಳಿ ನೀತಿ ಅವಧಿಯಲ್ಲಿ, ಈ ಕ್ಷೇತ್ರದಲ್ಲಿ ಕರ್ನಾಟಕವು ಸುಮಾರು ರೂ.5710 ಕೋಟಿಗಳಷ್ಟು ಹೂಡಿಕೆಯನ್ನು ಕಂಡಿದೆ. ಸುಮಾರು ರೂ.3326 ಕೋಟಿಗಳ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ. ಇತರ ಯೋಜನೆಗಳು ಅನುಮೋದನೆ ಮತ್ತು ಚರ್ಚೆಯ ವಿವಿಧ ಹಂತಗಳಲ್ಲಿವೆ. ಈ ಹೂಡಿಕೆಗಳನ್ನು ಕೇವಲ ಸಿದ್ಧ ಉಡುಪಿನ ಕ್ಷೇತ್ರದಲ್ಲಿ ಮಾತ್ರವಲ್ಲ ನೂಲುವಿಕೆ, ಪರಿಷ್ಕರಣೆ ಮತ್ತು ನೇಯ್ಗೆ ವಲಯದಂಥ ಮೌಲ್ಯ ಸರಣಿಗಳಲ್ಲಿಯೂ ಮಾಡಲಾಗಿದೆ. ಇದು ಕರ್ನಾಟಕ ರಾಜ್ಯವು ತನ್ನ ಜವಳಿ ವಲಯಗಳನ್ನು ಒಟ್ಟುಗೂಡಿಸಲು ಮುನ್ನಡೆಸುತ್ತಿದೆ. ಈ ನೀತಿಯು ರಾಜ್ಯದಲ್ಲಿ 3 ಲಕ್ಷಕ್ಕಿಂತ ಹೆಚ್ಚಿನ ಜನರಿಗೆ ಉದ್ಯೋಗ ಕಲ್ಪಿಸುತ್ತಿದೆ.

(4) ಸಣ್ಣ ಮತ್ತು ಮಧ್ಯಮ ಸಂಸ್ಥೆಗಳನ್ನು ಪ್ರೋತ್ಸಾಹಿಸಲು ಸಮೂಹ ಆಧಾರಿತ ತಂತ್ರ ವಿಧಾನವನ್ನು ಅಳವಡಿಸಲಾಯಿತು. ಮೂಲಭೂತ ಸೌಕರ್ಯಗಳು, ಯೋಜನೆಗೆ ಹಣಕಾಸಿನ ವ್ಯವಸ್ಥೆ, ಕಚ್ಚಾ ವಸ್ತುಗಳ ಖರೀದಿ, ಆಧುನಿಕ ಯಂತ್ರಗಳು ಮತ್ತು ತಂತ್ರಜ್ಞಾನಗಳನ್ನು ಪಡೆಯುವುದು ಇತ್ಯಾದಿಯಾಗಿ ವ್ಯಾಪಾರದ ಪ್ರತಿ ಅಂಶಗಳಲ್ಲಿ ಸಮಗ್ರ ದಕ್ಷತೆಯನ್ನು ಸಾಧಿಸುವುದು ಇದರ ಗುರಿಯಾಗಿತ್ತು. ಕರ್ನಾಟಕ ಸರ್ಕಾರವು ಜವಳಿ

ನೀತಿಯ ಮೂಲಕ ಇಂತಹ ಸಮೂಹ ಆಧಾರಿತ ಜವಳಿ ಉದ್ಯಾನಗಳಿಗೆ ಉತ್ಪಾದನಾ ಸರಣಿಯ ಏಕೀಕರಣವನ್ನು ಪ್ರೋತ್ಸಾಹಿಸಲು ಸಹಾಯ ನೀಡಿದೆ, ಇದರಿಂದಾಗಿ ಮಾರುಕಟ್ಟೆ ಸ್ಪರ್ಧಾತ್ಮಕತೆಯಲ್ಲೂ ಹೆಚ್ಚಳವಾಗಿದೆ.

(5) ಇದಲ್ಲದೆ, ಕರ್ನಾಟಕ ಸರ್ಕಾರವು ಕೇಂದ್ರ ಸರ್ಕಾರದ ಜವಳಿ ಸಚಿವಾಲಯದ (ಎಮ್.ಓ.ಟಿ) ಸಂಯೋಜಿತ ಜವಳಿ ಉದ್ಯಾನ ಯೋಜನೆ (ಎಸ್.ಐ.ಟಿ.ಪಿ)ಯ ಅನುಸಾರ ಅನುಮೋದಿತ ಯೋಜನೆಗಳಿಗೂ ಬೆಂಬಲ ನೀಡಿದೆ. ಅವು ಜುಲೈ 2010ರಲ್ಲಿ ಉದ್ಘಾಟನೆಗೊಂಡ ಬೆಂಗಳೂರಿನ ದೊಡ್ಡಬಳ್ಳಾಪುರ ಸಂಯೋಜಿತ ಜವಳಿ ಉದ್ಯಾನ ಮತ್ತು 2012ರಲ್ಲಿ ಅನುಮೋದನೆ ಪಡೆದ ಗುಲಬರ್ಗಾ ಜವಳಿ ಉದ್ಯಾನ ಪ್ರೈವೆಟ್ ಲಿಮಿಟೆಡ್‌ಗಳಾಗಿವೆ.

(6) ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ (ಕೆ.ಐ.ಎ.ಡಿ.ಬಿ)ಯು ಹಾಸನದಲ್ಲಿ ಒಂದು ಜವಳಿ ವಿಶೇಷ ಆರ್ಥಿಕ ವಲಯವನ್ನು ಪ್ರವರ್ತಿಸಿದೆ. ಹಾಸನ ಸಾಕಷ್ಟು ಸ್ಪರ್ಧಾತ್ಮಕ ಅನುಕೂಲಗಳನ್ನು ಒದಗಿಸುತ್ತದೆ ಹಾಗೂ ದಕ್ಷಿಣ–ಪೂರ್ವ ಏಷ್ಯಾ, ಆಫ್ರಿಕಾ, ಮಧ್ಯ ಪೂರ್ವ ಏಷ್ಯಾ ಮತ್ತು ಸಾರ್ಕ್ ರಾಷ್ಟ್ರಗಳಿಗೆ ಅಂತರಾಷ್ಟ್ರೀಯ ವ್ಯಾಪಾರ ಕೇಂದ್ರವಾಗುವಂಥ ಅನುಕೂಲಕರ ಪ್ರದೇಶದಲ್ಲಿದೆ.

(7) ರಾಜ್ಯ ಸರ್ಕಾರವು ನೀತಿಯ ಅವಧಿಯಲ್ಲಿ ಅನುಮೋದನೆ ಪಡೆದ ಬೃಹತ್ ಯೋಜನೆಗಳಿಗೆ ವಿಶೇಷ ನೆರವನ್ನು ನೀಡಿದೆ. ಬದಲಾಗಿ ಹೂಡಿಕೆದಾರರು ರಾಜ್ಯದಲ್ಲಿರುವ ತಮ್ಮ ವಿಶ್ವಾಸವನ್ನು ತೋರಿದ್ದಾರೆ ಮತ್ತು ರಾಜ್ಯಾದ್ಯಂತ ಬೆಂಗಳೂರು, ಬಳ್ಳಾರಿ, ಶಿವಮೊಗ್ಗ, ಮಂಡ್ಯ, ಬಿಜಾಪುರ ಮತ್ತು ಹಾಸನದಂಥ ಹಲವು ಜಿಲ್ಲೆಗಳಲ್ಲಿ ಬೃಹತ್ ಯೋಜನೆಗಳನ್ನು ಜಾರಿಗೊಳಿಸಲಾಗಿದೆ.

(8) ಸಮೂಹ ಮತ್ತು ಬೃಹತ್ ಯೋಜನೆಗಳಲ್ಲದೆ, 2008–2013ರ ಜವಳಿ ನೀತಿಯಡಿಯಲ್ಲಿ ರಾಜ್ಯಾದ್ಯಂತ ಹಲವು ಸಣ್ಣ ಮತ್ತು ಮಧ್ಯಮ ಘಟಕಗಳಿಗೆ ವಿತ್ತೀಯ ಬೆಂಬಲವನ್ನು ವಿಸ್ತರಿಸಲಾಗಿದೆ.

(9) ಮಾನವ ಸಂಪನ್ಮೂಲ ವಿಭಾಗ ಮತ್ತು ಕೌಶಲ್ಯ ಉನ್ನತೀಕರಣಕ್ಕಾಗಿ ಈ ಜವಳಿ ನೀತಿಯು ವಿಶೇಷ ಅವಕಾಶಗಳನ್ನು ಕಲ್ಪಿಸಿತ್ತು, ಇದು ಅಂತರಾಷ್ಟ್ರೀಯವಾಗಿ ಸ್ಪರ್ಧಾತ್ಮಕ ಜವಳಿ ಮತ್ತು ಉಡುಪಿನ ಉದ್ಯಮಕ್ಕಾಗಿ ಅತ್ಯಗತ್ಯವಾಗಿತ್ತು. 145 ಸಮರ್ಪಿಯ ಕೌಶಲ್ಯ ಅಭಿವೃದ್ಧಿ ಕೇಂದ್ರಗಳನ್ನು ನೀತಿಯ ಅವಧಿಯಲ್ಲಿ ಅನುಮೋದಿಸಲಾಯಿತು. ಈ ನೀತಿಯು ಕೌಶಲ್ಯ ಅಭಿವೃದ್ಧಿಗಾಗಿ ಸುಮಾರು 250 ಸಂಸ್ಥೆಗಳಿಗೆ ತರಬೇತಿಯ ಬೆಂಬಲವನ್ನು ಸಹ ನೀಡಿತು. ನೀತಿಯ ಅವಧಿಯಲ್ಲಿ ಕರ್ನಾಟಕ ಸರ್ಕಾರದ ಕೈಮಗ್ಗ ಮತ್ತು ಜವಳಿ ಇಲಾಖೆಯು ತನ್ನ ಹಲವು ಮಾನವ ಸಂಪನ್ಮೂಲ ವಿಭಾಗ ಮತ್ತು ಕೌಶಲ್ಯ ಉನ್ನತೀಕರಣ ಉಪಕ್ರಮಗಳ ಮೂಲಕ 1.17 ಲಕ್ಷ ಫಲಾನುಭವಿಗಳಿಗೆ ತರಬೇತಿ ನೀಡಿತು.

(10) ಜವಳಿ ನೀತಿಯಡಿಯಲ್ಲಿ ಸರ್ಕಾರದ ಅಧಿಕಾರಿಗಳು ಮತ್ತು ಎಸ್.ಎಮ್.ಏ.ಯಾಗಿ ವೃತ್ತಿಪರ ಸಲಹೆಗಾರರ ಒಂದು ಸಮರ್ಪಿತ ತಂಡವು ಉದ್ಯಮಗಳಿಗೆ ಅಗತ್ಯ ಬೆಂಬಲವನ್ನು ನೀಡುವತ್ತ ಸತತವಾಗಿ ಕಾರ್ಯನಿರ್ವಹಿಸುತ್ತಿರುವುದು. ಸುವರ್ಣ ವಸ್ತ್ರ ನೀತಿ 2008–2013ರ ಜಾರಿಗೊಳಿಸುವಿಕೆಗಾಗಿ ಕರ್ನಾಟಕ ಸರ್ಕಾರದ ಕೈಮಗ್ಗ ಮತ್ತು ಜವಳಿ ಇಲಾಖೆ ಯೋಜನೆಯ ನಿರ್ವಹಣಾ ಸಂಘಟನೆ (ಎಸ್.ಎಮ್.ಏ) ಆಗಿ ಐ.ಎಲ್&ಎಫ್.ಎಸ್ ಕ್ಲಸ್ಟರ್ ಡೆವಲಪ್ಮೆಂಟ್ ಇನಿಶಿಯೇಟಿವ್ ಲಿಮಿಟೆಡ್ ಅನ್ನು ನೇಮಿಸಲಾಗಿದೆ. ಐ.ಎಲ್&ಎಫ್.ಎಸ್ ಕ್ಲಸ್ಟರ್ಸ್ ಇಲಾಖೆಗೆ ಹೂಡಿಕೆದಾರರನ್ನು ಮಾರ್ಗದರ್ಶಿಸಲು ಮತ್ತು ರಾಜ್ಯಾದ್ಯಂತ ಯೋಜನೆಯ ನಿರ್ವಹಣಾ ಬೆಂಬಲ ನೀಡಲು ನೆರವಾಗುತ್ತದೆ.

(11) ಜವಳಿ ನೀತಿ 2008–2013, ಗುರಿಗಳು ಮತ್ತು ಸಾಧನೆಗಳು:

| ವರ್ಷ | ಯೋಜಿತ ಹೂಡಿಕೆ (ರೂ. ಕೋಟಿಗಳಲ್ಲಿ) | ಡಿಸೆಂಬರ್, 2012ರಲ್ಲಿ ವಾಸ್ತವಿಕ ಹೂಡಿಕೆ (ರೂ. ಕೋಟಿಗಳಲ್ಲಿ) | ಯೋಜಿತ ಉದ್ಯೋಗಗಳು | ವಾಸ್ತವಿಕ ಉದ್ಯೋಗಗಳು |
|---|---|---|---|---|
| 2008–09 | 1000 | 774 | 50000 | 14,569 |
| 2009–10 | 1500 | 1090 | 75000 | 57,275 |
| 2010–11 | 2500 | 1034 | 125000 | 62,694 |
| 2011–12 | 2500 | 2105 | 125000 | 99,248 |
| 2012–13 | 2500 | 706 | 125000 | 33,267 |
| **ಒಟ್ಟು** | **10000** | **5710** | **500000** | **2,67,053** |

(12) 2008–2013ರ ಜವಳಿ ನೀತಿಯಲ್ಲಿ ವಲಯದನುಸಾರ ಸಾರಾಂಶ:

(a) ಹೂಡಿಕೆಗಳು (ರೂ. ಕೋಟಿಗಳಲ್ಲಿ)

| ವರ್ಷ | 2008–09 | | 2009–10 | | 2010–11 | | 2011–12 | | 2012–13 (ಡಿಸೆಂಬರ್, 2012ರವರೆಗೆ) | |
|---|---|---|---|---|---|---|---|---|---|---|
| | ಯೋಜಿತ ಹೂಡಿಕೆ | ವಾಸ್ತವಿಕ ಹೂಡಿಕೆ | ಯೋಜಿತ ಹೂಡಿಕೆ | ವಾಸ್ತವಿಕ ಹೂಡಿಕೆ | ಯೋಜಿತ ಹೂಡಿಕೆ | ವಾಸ್ತವಿಕ ಹೂಡಿಕೆ | ಯೋಜಿತ ಹೂಡಿಕೆ | ವಾಸ್ತವಿಕ ಹೂಡಿಕೆ | ಯೋಜಿತ ಹೂಡಿಕೆ | ವಾಸ್ತವಿಕ ಹೂಡಿಕೆ |
| ಕೈಮಗ್ಗ | 2 | 1 | 3 | 0 | 5 | – | 5 | 0 | 5 | – |
| ವಿದ್ಯುತ್‌ಮಗ್ಗ | 50 | 2 | 75 | 1 | 125 | 35 | 125 | 32 | 125 | 2 |
| ನೂಲುವಿಕೆ | 150 | 206 | 225 | 555 | 375 | 340 | 375 | 258 | 375 | 405 |
| ಪರಿಷ್ಕರಣೆ | 150 | 185 | 225 | 0 | 375 | 0 | 375 | 0 | 375 | 0 |
| ಉಡುಪುಗಳು | 500 | 381 | 750 | 534 | 1250 | 659 | 1250 | 809 | 1250 | 299 |

| | | | | | | | | | | |
|---|---|---|---|---|---|---|---|---|---|---|
| ತಾಂತ್ರಿಕ ಜವಳಿ | 148 | – | 222 | – | 370 | – | 370 | 1006 | 370 | – |
| **ಒಟ್ಟು** | **1000** | **774** | **1500** | **1090** | **2500** | **1034** | **2500** | **2105** | **2500** | **706** |

(b) ಉದ್ಯೋಗ

| **ವರ್ಷ** | **2008–09** | | **2009–10** | | **2010–11** | | **2011–12** | | **2012–13 (ಡಿಸೆಂಬರ್, 2012ರವರೆಗೆ)** | |
|---|---|---|---|---|---|---|---|---|---|---|
| | ಯೋಜಿತ ಹೂಡಿಕೆ | ವಾಸ್ತವಿಕ ಹೂಡಿಕೆ | ಯೋಜಿತ ಹೂಡಿಕೆ | ವಾಸ್ತವಿಕ ಹೂಡಿಕೆ | ಯೋಜಿತ ಹೂಡಿಕೆ | ವಾಸ್ತವಿಕ ಹೂಡಿಕೆ | ಯೋಜಿತ ಹೂಡಿಕೆ | ವಾಸ್ತವಿಕ ಹೂಡಿಕೆ | ಯೋಜಿತ ಹೂಡಿಕೆ | ವಾಸ್ತವಿಕ ಹೂಡಿಕೆ |
| ಕೈಮಗ್ಗ | 1000 | 477 | 1500 | 27 | 2500 | 0 | 2500 | 50 | 2500 | 0 |
| ವಿದ್ಯುತ್‌ಮಗ್ಗ | 5000 | 40 | 7500 | 27 | 12500 | 354 | 12500 | 243 | 12500 | 124 |
| ನೂಲುವಿಕೆ | 2000 | 1240 | 3000 | 1545 | 5000 | 3025 | 5000 | 2112 | 5000 | 2257 |
| ಪರಿಷ್ಕರಣೆ | 1000 | 1366 | 1500 | 12 | 2500 | 35 | 2500 | 25 | 2500 | 12 |
| ಉಡುಪುಗಳು | 40000 | 11446 | 60000 | 55664 | 100000 | 59280 | 100000 | 94062 | 100000 | 30874 |
| ತಾಂತ್ರಿಕ ಜವಳಿ | 1000 | 0 | 1500 | 0 | 2500 | 0 | 2500 | 2756 | 2500 | 0 |
| **ಒಟ್ಟು** | **50000** | **14569** | **75000** | **57275** | **125000** | **62694** | **125000** | **99248** | **125000** | **33267** |

**ಅನುಬಂಧ 2: ನೂಲುವಿಕೆ ವಲಯದ ಪುನರ್ವಸತಿ ಪ್ಯಾಕೇಜ್**

(1) **ಕರ್ನಾಟಕದ ನೂಲುವಿಕೆ ಉದ್ಯಮ**

(a) ಕರ್ನಾಟಕವು ರಾಷ್ಟ್ರದ ಒಂದು ಪ್ರಮುಖ ಹತ್ತಿ ಬೆಳೆಯುವ ರಾಜ್ಯ. ಹತ್ತಿಯನ್ನು ಸುಮಾರು 5.5 ಲಕ್ಷ ಎಕರೆಗಳಷ್ಟು ಭೂಮಿಯಲ್ಲಿ ಬೆಳೆಯಲಾಗುತ್ತದೆ. ರಾಷ್ಟ್ರದಲ್ಲಿ ಬೆಳೆಯುವ ಒಟ್ಟು ಹತ್ತಿಯ 3.5%ವನ್ನು ಕರ್ನಾಟಕವು ಉತ್ಪಾದಿಸುತ್ತದೆ.

(b) ರಾಷ್ಟ್ರದಲ್ಲಿ ಬೆಳೆಯುವ ಒಟ್ಟು ಹತ್ತಿಯ ಸುಮಾರು 3.5%ವನ್ನು ಕರ್ನಾಟಕವು ಉತ್ಪಾದಿಸುತ್ತಿರುವುದಾದರೂ, ರಾಜ್ಯದಲ್ಲಿ 8 ಲಕ್ಷ ತಿರುಗಚ್ಚುಗಳ 31 ನೂಲಿನ ಗಿರಣಿಗಳು ಮಾತ್ರ ಇರುವವು.

(c) ರಾಜ್ಯದಲ್ಲಿ ಸಹಕಾರಿ ವಲಯದಲ್ಲಿ 10 ಸಹಕಾರಿ ನೂಲಿನ ಗಿರಣಿಗಳು ಇರುವವು, ಇವುಗಳಲ್ಲಿ 3 ಗಿರಣಿಗಳು ತಮ್ಮದೇ ನಿಧಿಯಿಂದ ಕಾರ್ಯಾಚರಣೆ ಮಾಡುತ್ತಿವೆ, 3 ಪರಿವರ್ತನಾ ಆಧಾರದ ಮೇಲೆ ಕಾರ್ಯಾಚರಣೆ ಮಾಡುತ್ತಿವೆ ಮತ್ತು 4 ತಮ್ಮ ಕಾರ್ಯಾಚರಣೆಗಳನ್ನು ಸ್ಥಗಿತಗೊಳಿಸಿವೆ.

(d) ಗಿರಣಿ ವಲಯವು ಗತಕಾಲದ ಯಂತ್ರಗಳ ಬಳಕೆ, ಕುಶಲಕರ್ಮಿಗಳ ಲಭ್ಯತೆ, ಹೆಚ್ಚಾಗುತ್ತಿರುವ ವಿದ್ಯುತ್ ವೆಚ್ಚಗಳು (ಹೆಚ್ಚಿನ ಯೂನಿಟ್ ವೆಚ್ಚಗಳು+ ಉತ್ಪಾದನೆಯನ್ನು ಮುಂದುವರಿಸಲು ಡೀಸೆಲ್ ಜನರೇಟರ್ ಸೆಟ್‌ಗಳ ಬಳಕೆಯಿಂದಾಗಿ) ಇತ್ಯಾದಿಯಂಥ ವಿವಿಧ ಕಾರಣಗಳಿಂದಾಗಿ ಬೃಹತ್ ತೊಂದರೆಗಳನ್ನು ಎದುರಿಸುತ್ತಿದೆ ಮತ್ತು ಇದು ಸಾಲದಂತೆ ಕಷ್ಟಕರ ಮಾರುಕಟ್ಟೆ ಪರಿಸ್ಥಿತಿಗಳನ್ನು ಎದುರಿಸುತ್ತಿವೆ.

(e) ನೂಲುವಿಕೆ ವಲಯವನ್ನು ಕಾರ್ಯಸಾಧ್ಯವಾಗಿಸಲು, ಆಧುನಿಕ ತಂತ್ರಜ್ಞಾನವನ್ನು ತರುವ ತೀವ್ರ ಅಗತ್ಯವಿದೆ, ನೂಲುವಿಕೆ ಪ್ರಕ್ರಿಯೆಯು ಗುಣಾತ್ಮಕವಾಗಿದ್ದು ಫೈಬರಿನ ಗುಣಮಟ್ಟ ಮತ್ತು ಕಚ್ಚಾ ವಸ್ತುಗಳ ಸ್ವಚ್ಛಗೊಳಿಸುವಿಕೆ ಪ್ರಕ್ರಿಯೆಯಿಂದಾಗಿ ಉತ್ಪನ್ನದ ಮೇಲೆ ಪರಿಣಾಮವಾಗುವುದರಿಂದಾಗಿ ಇದು ಅತ್ಯಗತ್ಯ.

(2) **ಮುಂದಾರಿ**

(a) ಕರ್ನಾಟಕವು ಚೆನ್ನಾಗಿ ಅಭಿವೃದ್ಧಿಗೊಂಡ ಸಿದ್ಧ ಉಡುಪಿನ ಉದ್ಯಮವನ್ನು ಹೊಂದಿದ್ದರೂ ಸಹ, ಇಲ್ಲಿಯ ಹೆಚ್ಚಿನ ಉಡುಪು ತಯಾರಿಕಾ ಘಟಕಗಳು ತಮಿಳು ನಾಡು, ಮಹಾರಾಷ್ಟ್ರ, ಗುಜರಾತ್ ಮತ್ತು ಪಂಜಾಬ್‌ನಂಥ ದೇಶದ ಇತರ ಭಾಗಗಳಿಂದ ತಮ್ಮ ಬಟ್ಟೆಯ ಅಗತ್ಯಗಳನ್ನು ಪೂರೈಸುತ್ತವೆ ಎಂಬುದು ವ್ಯಂಗ್ಯಪೂರ್ಣ.

(b) ರಾಜ್ಯದಲ್ಲಿ ಮೌಲ್ಯ ಸರಣಿಯ ಚಟುವಟಿಕೆಗಳನ್ನು ಹೊಂದಿರುವುದರಿಂದ ಉಡುಪು ತಯಾರಿಕಾ ಉತ್ಪನ್ನಗಳು ಹೆಚ್ಚು ಲಾಭದಾಯಕವಾಗುತ್ತವೆ.

(c) ಮಾರ್ಜಿನ್‌ಗಳು (ಲಾಭದ ಪ್ರಮಾಣ) ಹೆಚ್ಚಾಗಿರುವಾಗ, ಉತ್ತಮ ಬೆಲೆ ನಿಗದಿಯಿಂದಾಗಿ ದೊಡ್ಡ ಆರ್ಡರ್‌ಗಳನ್ನು (ಖರೀದಿ ಬೇಡಿಕೆಗಳು) ಪಡೆಯಲು ಉದ್ಯಮಕ್ಕೆ ಸಹಾಯವಾಗುತ್ತದೆ, ಇದರಿಂದಾಗಿ ಸಂಪೂರ್ಣ ಮೌಲ್ಯ ಸರಣಿಯು ಮುಂದುವರಿಯುತ್ತದೆ.

(d) ಜವಳಿ ಮೌಲ್ಯ ಸರಣಿಯಲ್ಲಿ ರಾಜ್ಯವು ಸ್ವಾವಲಂಬಿಯಾಗಲು, ಪ್ರಸ್ತುತವಾಗಿ ಇರುವ ಅಶಕ್ತ ಸಹಕಾರಿ ಗಿರಣಿಗಳನ್ನು ಆಧುನೀಕರಿಸುವ ಸಲುವಾಗಿ, ವಿಸ್ತರಣೆ ಮತ್ತು ಆಧುನೀಕರಣವನ್ನು ಕೈಗೊಳ್ಳಲು ನೂಲುವಿಕೆ ವಲಯವನ್ನು ಬೆಂಬಲಿಸುವುದು ಬಹಳ ಮುಖ್ಯ.

